**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 231 ಎನ್‌ಸಿಇ 2002 ದಿನಾಂಕ: 10.10.2002.

2. ಸರ್ಕಾರಿ ಆದೇಶ ಸಂಖ್ಯೆ: ಇಂಇ 23 ಎನ್‌ಸಿಇ 2004 ದಿನಾಂಕ: 10.03.2004.

3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 246 ಎನ್‌ಸಿಇ 2006 ದಿನಾಂಕ: 27.06.2006.

4. ಸರ್ಕಾರದ ಪತ್ರ ಸಂಖ್ಯೆ: ಇಎನ್ 174 ಎನ್‌ಸಿಇ 2010 ದಿನಾಂಕ: 30.11.2010.

5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-104/ಅಣಿಯೂರ್ ಎಂಹೆಚ್‌ಎಸ್/2012/41 ದಿನಾಂಕ: 04.1.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿಬಾಗಿಲು ಬಳಿ ಅಣಿಯೂರು ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2) ಮತ್ತು (3)ರ ಆದೇಶಗಳಲ್ಲಿ ಸಾಮರ್ಥ್ಯವನ್ನು 10.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು. ಸದರಿ ಅಭಿವೃದ್ಧಿದಾರರಿಗೆ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 20.09.2012ರವರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿಬಾಗಿಲು ಬಳಿ ಅಣಿಯೂರು ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಂಬಂಧ ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ ಮತ್ತು ಕಾರ್ಖಾನೆ ಮತ್ತು ಬಾಯ್ಲರ್‌ಗಳ ಇಲಾಖೆಯ ಮಂಜೂರಾತಿಯನ್ನು ಹೊರತುಪಡಿಸಿ, ಸಂಬಂಧಿಸಿದ ಎಲ್ಲಾ ಇಲಾಖೆಗಳ ಅನುಮತಿಯನ್ನು ಪಡೆದಿರುವುದರಿಂದ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶ ವಿಸ್ತರಣಾ ಶುಲ್ಕವನ್ನು ಹಾಗೂ ಪ್ರತಿ ಮೆಗಾ ವ್ಯಾಟ್‌ಗೆ ರೂ 3.00 ಲಕ್ಷಗಳ ನೇರವೇರಿಕೆ ಖಾತರಿ ಪಡೆದು ದಿನಾಂಕ 21.9.2012 ರಿಂದ 20.9.2014ರವರೆಗೆ ಕಾಲಾವಕಾಶವನ್ನು ವಿಸ್ತರಿಸಬಹುದೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ. ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 19 ಎನ್‌ಸಿಇ 2013, ಬೆಂಗಳೂರು, ದಿನಾಂಕ: 14.05.2013.**

ಮೆ॥ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿಬಾಗಿಲು ಬಳಿ ಅಣಿಯೂರು ಹೊಳೆಗೆ ಅಡ್ಡಲಾಗಿ ಹಂಚಿಕೆಮಾಡಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಈ ಕೆಳಗಿನ ಷರತ್ತಿಗೊಳಪಟ್ಟು ಕಾಲಾವಕಾಶವನ್ನು ದಿನಾಂಕ 21.9.2012 ರಿಂದ ದಿನಾಂಕ: 20.09.2014ರವರೆಗೆ ವಿಸ್ತರಿಸಿ ಆದೇಶಿಸಿದೆ :–

1. ಪ್ರತಿ ಮೆಗಾ ವ್ಯಾಟ್‌ಗೆ ರೂ 3.00 ಲಕ್ಷಗಳ ನೆರವೇರಿಕೆ ಖಾತರಿಯನ್ನು (Performance Guarantee) ಮತ್ತು ನಿಯಮಾನುಸಾರ ಕಾಲಾವಧಿ ವಿಸ್ತರಣಾ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸತಕ್ಕದ್ದು.
2. ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.
3. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

PR.1015

SC.25

## ಇಂಧನ ಸಚಿವಾಲಯ

**ವಿಷಯ:** ಮೆ:: ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಜೂರಾಗಿ ಅನುಷ್ಠಾನಗೊಂಡಿರುವ 3.75 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 11.2 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 106 ಎನ್‌ಸಿಇ 2005 ದಿನಾಂಕ: 15.4.2005.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/MAHE (3.75 MW to 11.2 MW)/ 2012/67 ದಿನಾಂಕ: 07.1.2013

3) ದಿನಾಂಕ 11.03.2013 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಮಣಿಪಾಲ್ ಅಕಾಡೆಮಿ ಆಫ್ ಹೈಯರ್ ಎಡ್ಯುಕೇಷನ್, ಮಣಿಪಾಲ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಪಲ್ಲವನಹಳ್ಳಿ ಮತ್ತು ಕುರುಮರಡಿಕೆರೆ ಗ್ರಾಮಗಳಲ್ಲಿ ಮಂಜೂರಾಗಿದ್ದ 3.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ:: ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಿ ಆದೇಶಿಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ:: ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಜೂರಾಗಿರುವ 3.75 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 11.2 ಮೆ.ವ್ಯಾ.ಗೆ ಹೆಚ್ಚಿಸಲು ಹಾಗೂ ಉತ್ಪಾದನೆಯಾಗುವ ವಿದ್ಯುತ್ತನ್ನು ಸ್ವಂತ ಬಳಕೆಗೆ ಬಳಸಿಕೊಳ್ಳುವ ಮತ್ತು ಹೆಚ್ಚಳಗೊಂಡ ಸಾಮರ್ಥ್ಯವನ್ನು ಅನುಷ್ಠಾನಗೊಳಿಸಲು ಎರಡು ವರ್ಷಗಳ ಕಾಲಾವಕಾಶ ಬೇಕಾಗಬಹುದೆಂದು ಅಭಿಪ್ರಾಯಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ 11.3.2013ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಮಿತಿಯು ಪ್ರಸ್ತಾವನೆಯನ್ನು ಸವಿವರವಾಗಿ ಪರಿಶೀಲಿಸಿ ಮೆ: ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಈಗಾಗಲೇ ಹಂಚಿಕೆಯಾಗಿ ಅನುಷ್ಠಾನಗೊಂಡಿರುವ 3.75 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸ್ಥಳದಲ್ಲಿಯೇ ಹೆಚ್ಚಿನ ಸಾಮರ್ಥ್ಯದ ಟರ್ಬೈನ್‌ಗಳನ್ನು ಅಳವಡಿಸಿ ಯೋಜನೆಯ ಸಾಮರ್ಥ್ಯವನ್ನು 11.2 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 37 ಎನ್‌ಸಿಇ 2013, ಬೆಂಗಳೂರು, ದಿನಾಂಕ: 16.05.2013.**

ಮೆ:: ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಪಲ್ಲವನಹಳ್ಳಿ ಮತ್ತು ಕುರುಮರಡಿಕೆರೆ ಗ್ರಾಮಗಳಲ್ಲಿ ಮಂಜೂರಾಗಿರುವ 3.75 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 11.2 ಮೆ.ವ್ಯಾ.ಗೆ ಹೆಚ್ಚಿಸಲು ಮತ್ತು ನಿಗದಿತ ಸಾಮರ್ಥ್ಯ ಹೆಚ್ಚಳ ಶುಲ್ಕ ಪಾವತಿಸುವ ಮತ್ತು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಲಾಗಿದೆ.

1 **ಮೆ:: ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಮಣಿಪಾಲ್ ಹೆಲ್ತ್ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್** ರವರು ಉತ್ಪಾದಿಸುವ ವಿದ್ಯುತ್ತನ್ನು ಸರಬರಾಜು ಮಾಡುವ ಸಂಬಂಧ ಬೆಂಗಳೂರು ವಿದ್ಯುತ್ ಸರಬರಾಜು ಕಂಪಂನಿಯೊಂದಿಗೆ ವಿದ್ಯುತ್ ಖರೀದಿ ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

3 ಸದರಿ ಯೋಜನೆಯನ್ನು ಅರಣ್ಯ ಇಲಾಖೆಯ ಅನುಮೋದನೆ ಪಡೆದ ನಂತರ ಅನುಷ್ಠಾನಗೊಳಿಸತಕ್ಕದ್ದು.

4 ಸದರಿ ಯೋಜನೆಯನ್ನು ಆದೇಶ ಹೊರಡಿಸಿದ ದಿನಾಂಕದಿಂದ ಎರಡು ವರ್ಷದೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

PR.1017
SC.25

## ಇಂಧನ ಸಚಿವಾಲಯ

**ವಿಷಯ:** ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 122 ಎನ್‌ಸಿಇ 2001 ದಿನಾಂಕ: 29.11.2001.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 180 ಎನ್‌ಸಿಇ 2004 ದಿನಾಂಕ: 4.6.2004.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 517 ಎನ್‌ಸಿಇ 2008 ದಿನಾಂಕ: 08.05.2009.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 381 ಎನ್‌ಸಿಇ 2009, ದಿನಾಂಕ: 30.11.2010.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 88 ಎನ್‌ಸಿಇ 2012, ದಿನಾಂಕ: 15.05.2012
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-396/Aremadanahalli MHS /2012/522 ದಿನಾಂಕ: 4.3.2012 ಮತ್ತು ಕೆಆರ್‌ಇಡಿ/06/SH-396/Aremadanahalli MHS/2013/772 ದಿನಾಂಕ: 26/27.3.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂ/6ಡು ತಾಲ್ಲೂಕಿನಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 1.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಸರ್ಕಾರಿ ಆದೇಶ ಸಂಖ್ಯೆ: ಡಿಇ 122 ಎನ್‌ಸಿಇ 2001 ದಿನಾಂಕ: 29.11.2001 ಹಾಗೂ ಡಿಇ 180 ಎನ್‌ಸಿಇ 2004 ದಿನಾಂಕ: 4.6.2004ಗಳಲ್ಲಿ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ ಹಂಚಿಕೆಯಾಗಿದ್ದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ರದ್ದು ಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶದಲ್ಲಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಸರ್ಕಾರಿ ಆದೇಶ ಸಂಖ್ಯೆ: ಇಎನ್ 517 ಎನ್‌ಸಿಇ 2008 ದಿನಾಂಕ: 08.05.2009ರಲ್ಲಿ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ ಹಂಚಿಕೆಯಾಗಿದ್ದ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಯನ್ನು ರದ್ದುಪಡಿಸಿರುವುದನ್ನು ಪೂರ್ವಸ್ಥಿತಿಗೆ ತರಲಾಗಿತ್ತು, ಹಾಗೂ ಸದರಿ ಆದೇಶ ಹೊರಡಿಸಿದ 15 ತಿಂಗಳುಗಳ ಒಳಗಾಗಿ ಯೋಜನೆಯನ್ನು ಪೂರ್ಣಗೊಳಿಸತಕ್ಕದ್ದೆಂದು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಮತ್ತೆ ಯಾವುದೇ ಕಾರಣಕ್ಕೂ ಕಾಲಾವಕಾಶವನ್ನು ವಿಸ್ತರಿಸುವುದಿಲ್ಲ ಹಾಗೂ ಪ್ರತಿ ಮೆಗಾ ವ್ಯಾಟ್‌ಗೆ ರೂ. 3.00 ಲಕ್ಷಗಳ ನೆರವೇರಿಕೆ ಖಾತರಿ (Performance Guarantee) ಯನ್ನು ಕೆ.ಆರ್.ಇ.ಡಿ.ಎಲ್.ಗೆ ನೀಡತಕ್ಕದ್ದೆಂಬ ಷರತ್ತಿಗೊಳಪಟ್ಟು ಅಂತಿಮವಾಗಿ ಕಾಲಾವಕಾವನ್ನು ದಿನಾಂಕ 01.3.2012 ರಿಂದ ಒಂದು ವರ್ಷದವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರು ತಮಗೆ ಯೋಜನೆಯ ಅನುಷ್ಠಾನಕ್ಕೆ ನೀಡಿರುವ ಅವಧಿಯು ದಿನಾಂಕ 01.3.2013ಕ್ಕೆ ಮುಕ್ತಾಯಗೊಂಡಿದ್ದು, ಯೋಜನೆಗೆ ಸಂಬಂಧಪಟ್ಟಂತೆ ನಿಗಧಿತ ಕಾಲಾವಧಿಯಲ್ಲಿ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಿದ್ದು, ಯೋಜನೆಯನ್ನು ವಿದ್ಯುತ್ ಜಾಲಕ್ಕೆ ಸಂಪರ್ಕ ನೀಡಲು ಕಾಲುವೆಯಲ್ಲಿ ನೀರಿನ ಹರಿವು ಇಲ್ಲದಿರುವುದರಿಂದ ಸಂಪರ್ಕ ನೀಡಲು ಸಾಧ್ಯವಾಗಿರುವುದಿಲ್ಲವೆಂದು ತಿಳಿಸಿ ಕಾಲುವೆಯಲ್ಲಿ ನೀರಿನ ಹರಿವು ಇರುವ ಅವಧಿಯಲ್ಲಿ ವಿದ್ಯುತ್ ಜಾಲಕ್ಕೆ ಸಂಪರ್ಕ ನೀಡಬೇಕಾಗಿರುದರಿಂದ ಸದರಿ ಯೋಜನೆಗೆ ದಿನಾಂಕ 01.3.2013ರಿಂದ ಮುಂದಿನ 8 ತಿಂಗಳ ಅವಧಿಗೆ ಕಾಲಾವಕಾಶ ವಿಸ್ತರಿಸುವಂತೆ ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಅಭಿವೃದ್ಧಿದಾರರು ತಿಳಿಸಿರುವಂತೆ ಯೋಜನೆಯ ಕಾಮಗಾರಿ ಪೂರ್ಣಗೊಂಡಿದ್ದು, ವಿದ್ಯುತ್ ಜಾಲಕ್ಕೆ ಸಂಪರ್ಕ ಕಲ್ಪಿಸಲು ಅಭಿವೃದ್ಧಿದಾರರು ಈಗಾಗಲೇ ಪಾವತಿಸಿರುವ ₹4.5 ಲಕ್ಷ ನೆರವೇರಿಕೆ ಖಾತರಿ (Performance Guarantee) ಯ ಅವಧಿಯನ್ನು ದಿನಾಂಕ 01.3.2013ರಿಂದ 8 ತಿಂಗಳ ಅವಧಿಗೆ ಹೆಚ್ಚಿಸಿ ಈ ಅವಧಿಯಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದಲ್ಲಿ ನಗಧೀಕರಿಸಿಕೊಳ್ಳುವ ಷರತ್ತಿಗೊಳಪಟ್ಟು ದಿನಾಂಕ 01.3.2013 ರಿಂದ 8 ತಿಂಗಳ ಕಾಲಾವಕಾಶವನ್ನು ವಿಸ್ತರಿಸುವ ಅಭಿಪ್ರಾಯದೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 94 ಎನ್‌ಸಿಇ 2013, ಬೆಂಗಳೂರು, ದಿನಾಂಕ: 21.05.2013**

ಮೆ॥ ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ ಹಂಚಿಕೆಯಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ದಿನಾಂಕ 01.3.2013 ರಿಂದ ದಿನಾಂಕ 31.10.2013 ರವರೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

1. ಕೆ.ಆರ್.ಇ.ಡಿ.ಎಲ್.ಗೆ ಪಾವತಿಸಿರುವ ₹4.5 ಲಕ್ಷಗಳ ನೇರವೇರಿಕೆ ಖಾತರಿ ಮೊತ್ತದ ಅವಧಿಯನ್ನು ದಿನಾಂಕ 01.03.2013 ರಿಂದ 31.10.2013ರವರೆಗೆ ವಿಸ್ತರಿಸಿದೆ. ಈ ಅವಧಿಯೊಳಗಾಗಿ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದಲ್ಲಿ ಈಗಾಗಲೇ ಪಾವತಿಸಿರುವ ರೂ. 4.5 ಲಕ್ಷಗಳ ನೇರವೇರಿಕೆ ಖಾತರಿ (Performance Guarantee) ಮೊತ್ತವನ್ನು ಕೆ.ಆರ್.ಇ.ಡಿ.ಎಲ್. ನಗಧೀಕರಿಸಿಕೊಳ್ಳುತ್ತದೆ.
2. ಅಭಿವೃದ್ಧಿದಾರರು ನಿಯಮಾನುಸಾರ ಕಾಲಾವಧಿ ವಿಸ್ತರಣಾ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್. ಸಂಸ್ಥೆಗೆ ಪಾವತಿಸತಕ್ಕದ್ದು.
3. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

PR.1020
SC.25

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.80 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಪಾಲಿಪ್ಯಾಕ್ ಇಂಡಸ್ಟ್ರೀಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2012 ದಿನಾಂಕ: 28.10.2012.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 251 ಎನ್‌ಸಿಇ 2012 ದಿನಾಂಕ: 19.12.2012.
6) ಸರ್ಕಾರಿ ಆದೇಶ ಸಂಖ್ಯೆ: ಇಎನ್ 107 ಎನ್‌ಸಿಇ 2013 ದಿನಾಂಕ: 16.05.2013.
7) ಸರ್ಕಾರಿ ಆದೇಶ ಸಂಖ್ಯೆ: ಇಎನ್ 376 ಎನ್‌ಸಿಇ 2012 ದಿನಾಂಕ: 22.01.2013.
8) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/PPI-0.8 MW (VWILLP-204 MW)/2012/641 ದಿನಾಂಕ: 14.03.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.80 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಸ್ವಸ್ತಿಕ್ ಕನ್‌ಸ್ಟ್ರಕ್ಷನ್ ಸರ್ವೀಸಸ್ ರವರಿಗೆ ಕೆಲವೊಂದು ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಾಕಿ ಇರುವ ಸಾಮರ್ಥ್ಯದಿಂದ 16 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ರಿನೀವ್ ವಿಂಡ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಈ ಕೆಳಗಿನ ಶೆಡ್ಯೂಲ್‌ನಲ್ಲಿ ನಮೂದಿಸಿರುವಂತೆ 205.6 ಮೆ.ವ್ಯಾ.ಗೆ ಹೆಚ್ಚಿಸಿ ದಿನಾಂಕ 31.3.2014ರೊಳಗೆ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಆದೇಶಿಸಲಾಗಿರುತ್ತದೆ.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1’55”- 15°8’0” N<br>**Longitude**: 75°08’56”- 75°14’23” E<br>**Ridge peaks:** 701, 714, 682, 717, 713, 698, 733, 722m AMSL. | 79.20 | 1.60 | 80.80 MW<br>(101 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>Latitude: 15°0’0”- 15°10’30” N<br>Longitude: 75°15’0”- 75°28’19” E<br>Ridge peaks: 681, 671, 676, 638, 624, 698, 664, 611, 644, 701, 720, 663, 682, 664, 708, 665, 664m AMSL. | 124.80 | 0 | 124.80 MW<br>(156 x 800 KW) |
| | **TOTAL** | **204** | **1.6** | **205.60 MW<br>(257 x 800 KW)** |

ಮೇಲೆ ಓದಲಾದ (8)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.80 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಪಾಲಿಪ್ಯಾಕ್ ಇಂಡಸ್ಟ್ರೀಸ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಮಂಜೂರಾಗಿರುವ ಒಟ್ಟು 204 ಮೆ.ವ್ಯಾ. ಸಾಮರ್ಥ್ಯದಲ್ಲಿ 127.20 ಮೆ.ವ್ಯಾ. ಸಾಮರ್ಥ್ಯವನ್ನು ಈಗಾಗಲೇ ವಿವಿಧ ಹೂಡಿಕೆದಾರರಿಗೆ ವರ್ಗಾಯಿಸಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು ದಿನಾಂಕ 31.3.2013ರೊಳಗಾಗಿ ಅನುಷ್ಠಾನಗೊಳಿಸುವುದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡುವುದು ಮತ್ತು ಸ್ವಂತ ಬಳಕೆಗಾಗಿ ಉಪಯೋಗಿಸಿಕೊಳ್ಳಲಾಗುವುದೆಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 43 ಎನ್‌ಸಿಇ 2013, ಬೆಂಗಳೂರು, ದಿನಾಂಕ: 22.05.2013.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಾಕಿ ಇರುವ ಸಾಮರ್ಥ್ಯದಿಂದ **0.80 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಪಾಲಿಪ್ಯಾಕ್ ಇಂಡಸ್ಟ್ರೀಸ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**SHEDULE**

| Sl.No. | Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|---|
| 1 | Hanumana-halli | Kundagol / Dharwad | 0.80 | 9/2 | 217 | 1.50 | Lat: 15°05'59.4" N<br>Long: 75°11'41.8'' E |

1 **ಮೆ:: ಪಾಲಿಪ್ಯಾಕ್ ಇಂಡಸ್ಟ್ರೀಸ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ:: ಪಾಲಿಪ್ಯಾಕ್ ಇಂಡಸ್ಟ್ರೀಸ್** ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಮತ್ತು ಸ್ವಂತಕ್ಕೆ ಬಳಸಿಕೊಳ್ಳಲು ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

4 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**PR.1022**

**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 204 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 0.80 ಮೆ.ವ್ಯಾ ಸಾಮರ್ಥ್ಯವನ್ನು ಮೆ: ಬೀದರ್ ರಬ್ಬರ್ ಅಂಡ್ ರಿಕ್ಲೈಮ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 42 ಎನ್‌ಸಿಇ 2006 ದಿನಾಂಕ: 20.4.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 462 ಎನ್‌ಸಿಇ 2006 ದಿನಾಂಕ: 19.12.2006.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 322 ಎನ್‌ಸಿಇ 2011 ದಿನಾಂಕ: 28.10.2011.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 250 ಎನ್‌ಸಿಇ 2012 ದಿನಾಂಕ: 28.10.2012.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 251 ಎನ್‌ಸಿಇ 2012 ದಿನಾಂಕ: 19.12.2012.
6) ಸರ್ಕಾರಿ ಆದೇಶ ಸಂಖ್ಯೆ: ಇಎನ್ 107 ಎನ್‌ಸಿಇ 2013 ದಿನಾಂಕ: 16.05.2013.
7) ಸರ್ಕಾರಿ ಆದೇಶ ಸಂಖ್ಯೆ: ಇಎನ್ 376 ಎನ್‌ಸಿಇ 2012 ದಿನಾಂಕ: 22.01.2013.
8) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/BR&RPL-0.8 MW (VWILLP-204 MW)/2012/737 ದಿನಾಂಕ: 22.03.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಗೆ ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ 150.66 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: Logaer Machines (I) Ltd. ಕಂಪನಿಯ ಹೆಸರನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಎಂದು ಬದಲಾಯಿಸಲು ಹಾಗೂ ಮೆ:: Logaer Machines (I) Ltd. ರವರಿಗೆ ಹಂಚಿಕೆಯಾಗಿರುವ ಎಲ್ಲಾ ಪವನ ವಿದ್ಯುತ್ ಯೋಜನೆಗಳನ್ನು ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ವರ್ಗಾಯಿಸಲು ಅನುಮೋದನೆ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 150.66 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅಂಶಿಕ ಸಾಮರ್ಥ್ಯವಾದ 69.63 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 200 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ, ಕಂಪನಿಗೆ ಮಂಜೂರಾಗಿದ್ದ 200 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 204 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.80 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ಸ್ವಸ್ತಿಕ್ ಕನ್ಸ್ಟ್ರಕ್ಷನ್ ಸರ್ವೀಸಸ್ ರವರಿಗೆ ಕೆಲವೊಂದು ಷರತ್ತಿಗೊಳಪಟ್ಟು ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಾಕಿ ಇರುವ ಸಾಮರ್ಥ್ಯದಿಂದ 16 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ:: ರಿನೀವ್ ವಿಂಡ್ ಎನರ್ಜಿ (ಕರ್ನಾಟಕ) ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಗಳ ಶಿಗ್ಗಾಂವ್ ಮತ್ತು ಕುಂದಗೋಳ ತಾಲ್ಲೂಕುಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಈ ಕೆಳಗಿನ ಶೆಡ್ಯೂಲ್‌ನಲ್ಲಿ ನಮೂದಿಸಿರುವಂತೆ 205.6 ಮೆ.ವ್ಯಾ.ಗೆ ಹೆಚ್ಚಿಸಿ ದಿನಾಂಕ 31.3.2014ರೊಳಗೆ ಅನುಷ್ಠಾನಗೊಳಿಸುವ ಷರತ್ತಿಗೊಳಪಟ್ಟು ಆದೇಶಿಸಲಾಗಿರುತ್ತದೆ.

| Sl No. | Geographical Area Details of the Project | Sanctioned capacity in MW | Enhancement Proposed in MW | No. of WTGs & rating in KW |
|---|---|---|---|---|
| 1 | A large plain area spread around the village of Timmapura, Kabnur, Ingalagi, Ramapura in Haveri and Dharwad District and it also consists of plains with higher elevations and has two main peaks. The proposed area is held by the following Geographical co-oridinates :-<br>**Latitude**: 15°1’55”- 15°8’0” N<br>**Longitude**: 75°08’56”- 75°14’23” E<br>**Ridge peaks:** 701, 714, 682, 717, 713, 698, 733, 722m AMSL. | 79.20 | 1.60 | 80.80 MW (101 x 800 KW) |
| 2 | A very vast area encompasses high plains and small ridges spread around the villages Kongapura, Sisvinhal, Shanlipur, Huvinsigli, Sigli, Gudgeri and Ramgeri. A railway track runs into this area. This area has moderate evelations varying from 580 to 680 Mtrs and also consists of several peaks. The main places of this areas are Halgur, Gudgeri, Lakshmeshwar, Sigli, Karadgi, Nelgudda etc and the area is covered in the following Geographical co-oridinates :-<br>Latitude: 15°0’0”- 15°10’30” N<br>Longitude: 75°15’0”- 75°28’19” E<br>Ridge peaks: 681, 671, 676, 638, 624, 698, 664, 611, 644, 701, 720, 663, 682, 664, 708, 665, 664m AMSL. | 124.80 | 0 | 124.80 MW (156 x 800 KW) |
| **TOTAL** | | **204** | **1.6** | **205.60 MW (257 x 800 KW)** |

ಮೇಲೆ ಓದಲಾದ (8)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 204 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 0.80 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಬೀದರ್ ರಬ್ಬರ್ ಅಂಡ್ ರಿಕ್ಲೈಮ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಮಂಜೂರಾಗಿರುವ ಒಟ್ಟು 204 ಮೆ.ವ್ಯಾ. ಸಾಮರ್ಥ್ಯದಲ್ಲಿ 128.8 ಮೆ.ವ್ಯಾ. ಸಾಮರ್ಥ್ಯವನ್ನು ಈಗಾಗಲೇ ವಿವಿಧ ಹೂಡಿಕೆದಾರರಿಗೆ ವರ್ಗಾಯಿಸಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ ಜಮೀನಾಗಿದ್ದು, ಈ ಯೋಜನೆಯನ್ನು ದಿನಾಂಕ 31.3.2013ರೊಳಗಾಗಿ ಅನುಷ್ಠಾನಗೊಳಿಸುವುದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡುವುದು ಮತ್ತು ಸ್ವಂತ ಬಳಕೆಗಾಗಿ ಉಪಯೋಗಿಸಿಕೊಳ್ಳಲಾಗುವುದೆಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 124 ಎನ್‌ಸಿಇ 2013, ಬೆಂಗಳೂರು, ದಿನಾಂಕ: 22.05.2013.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಾವೇರಿ ಮತ್ತು ಧಾರವಾಡ ಜಿಲ್ಲೆಯ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 205.6 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಾಕಿ ಇರುವ ಸಾಮರ್ಥ್ಯದಿಂದ **0.80 ಮೆ.ವ್ಯಾ.** ಸಾಮರ್ಥ್ಯದ ಯೋಜನೆಯನ್ನು ಮೆ:: ಬೀದರ್ ರಬ್ಬರ್ ಅಂಡ್ ರಿಕ್ಲೈಮ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ವರ್ಗಾಯಿಸಲಾಗಿದೆ:–**

**SHEDULE**

| Sl.No. | Village Name | Taluk/ District | MW | Land Survey number | WTG's No. | Extent of Land per WTG (Acres) | Latitude, Longitude and Ridge peaks |
|---|---|---|---|---|---|---|---|
| 1 | Kyalkonda | Shiggaon / Haveri | 0.80 | 37/3 | 218 | 1.00 | Lat: 15°05'07.9" N<br>Long: 75°15'36.1'' E |

1 **ಮೆ::** ಬೀದರ್ ರಬ್ಬರ್ ಅಂಡ್ ರಿಕ್ಲೈಮ್ಸ್ ಪ್ರೈವೇಟ್ ಲಿಮಿಟೆಡ್ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ::** ಬೀದರ್ ರಬ್ಬರ್ ಅಂಡ್ ರಿಕ್ಲೈಮ್ಸ್ ಪ್ರೈವೇಟ್ ಲಿಮಿಟೆಡ್ ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಮತ್ತು ಸ್ವಂತಕ್ಕೆ ಬಳಸಿಕೊಳ್ಳಲು ಅನುಮತಿಸಿದೆ.

3 ಸದರಿ ಯೋಜನೆಯನ್ನು ದಿನಾಂಕ 31.3.2014ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

4 ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರವಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

PR.1023
SC.25

## ಇಂಧನ ಸಚಿವಾಲಯ

**ವಿಷಯ:** ಮೆ: ಬಿ & ಎಸ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು 2.00 ಮೆ.ವ್ಯಾ ಸಾಮರ್ಥ್ಯಕ್ಕೆ ತಗ್ಗಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 228 ಎನ್‌ಸಿಇ 2009 ದಿನಾಂಕ: 25.11.2009.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್–340/ ಲೋಕಪಾವನಿ ಎಂಹೆಚ್‌ಎಸ್ /2012/230 ದಿನಾಂಕ: 30.01.2013 ಮತ್ತು ಕೆಆರ್‌ಇಡಿ/08/ಎಸ್‌ಹೆಚ್–340/ಲೋಕಪಾವನಿ ಎಂಹೆಚ್‌ಎಸ್/2012/829 ದಿನಾಂಕ: 02.04.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ:: ಬಿ & ಎಸ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನ ಪಟ್ಟಸೋಮನಹಳ್ಳಿ ಗ್ರಾಮದ ಬಳಿ ಲೋಕಪಾವನಿ ನದಿಗೆ ಅಡ್ಡಲಾಗಿ 3.00 ಮೆ.ವ್ಯಾ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಬಿ & ಎಸ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನ ಪಟ್ಟಸೋಮನಹಳ್ಳಿ ಗ್ರಾಮದ ಬಳಿ ಲೋಕಪಾವನಿ ನದಿಗೆ ಅಡ್ಡಲಾಗಿ 3.00 ಮೆ.ವ್ಯಾ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಸಂಬಂಧಿಸಿದಂತೆ ನೀರಿನ Operating Head ದೊರೆಯದಿರುವ ಕಾರಣದಿಂದ ಯೋಜನಾ ಸಾಮರ್ಥ್ಯವನ್ನು 2.00 ಮೆ.ವ್ಯಾ. ಸಾಮರ್ಥ್ಯಕ್ಕೆ ತಗ್ಗಿಸಿ ಯೋಜನೆಯನ್ನು 2 ಹಂತಗಳಲ್ಲಿ ಕ್ರಮವಾಗಿ 1.00 ಮೆ.ವ್ಯಾ.ನಂತೆ ಎರಡು ಪ್ರದೇಶಗಳಲ್ಲಿ ಅನುಷ್ಠಾನಗೊಳಿಸುವ ಕುರಿತಂತೆ ವಿಸ್ತೃತ ಯೋಜನಾ ವರದಿಯನ್ನು ಹಾಗೂ ಈ ಸಂಬಂಧ ಅಭಿವೃದ್ದಿದಾರರು ಅರಣ್ಯ ಮತ್ತು ನೀರಾವರಿ ಇಲಾಖೆಯನ್ನು ಹೊರತು ಪಡಿಸಿ ಯೋಜನೆಗೆ ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದ ನಿರಾಕ್ಷೇಪಣಾ ಪತ್ರವನ್ನು (NOC) ಪಡೆದಿರುತ್ತಾರೆಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 48 ಎನ್‌ಸಿಇ 2013, ಬೆಂಗಳೂರು, ದಿನಾಂಕ: 27.05.2013.**

ಮೆ:: ಬಿ & ಎಸ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕಿನ ಪಟ್ಟಸೋಮನಹಳ್ಳಿ ಗ್ರಾಮದ ಬಳಿ ಲೋಕಪಾವನಿ ನದಿಗೆ ಅಡ್ಡಲಾಗಿ ಮಂಜೂರಾಗಿರುವ 3.00 ಮೆ.ವ್ಯಾ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆ.ವ್ಯಾ. ಸಾಮರ್ಥ್ಯಕ್ಕೆ ತಗ್ಗಿಸಿ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು **ಆದೇಶಿಸಲಾಗಿದೆ:–**

## SHEDULE

| Sl.No. | Details | Allotted 3 MW | Modified 2 MW in two stages | |
|---|---|---|---|---|
| | | | Stage-1 (1*1) | Stage-2 (1*1) |
| 1 | Weir: Latitude/ Longitude | 12°29'59"<br>76°43'06" | 12°30'41"<br>76°43'06" | 12°30'06"<br>76°43'02" |
| 2 | Power House: Latitude/ Longitude | 12°29'08"<br>76°43'38" | 12°30'39"<br>76°43'06" | 12°30'04"<br>76°43'05" |
| 3 | Full Reservoir Level (FRL) in Mts. | EL 702 | EL 702.124 | EL 694.7 |
| 4 | Tail Water Level (TWL) in Mts. | --- | EL 694.75 | EL 687.98 |
| 5 | Design Head (in Mts.) | 22 Mts. | 6.31 Mts. | 6.58 Mts. |
| 6 | Design Discharge in cumecs | 20 cumecs | 18.66 cumecs | 17.91 cumecs |

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1025**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಹಂಚಿಕೆಯಾಗಿರುವ 477.36 ಮೆ.ವ್ಯಾ. ಸಾಮರ್ಥ್ಯದ ಯೋಜನೆಯಲ್ಲಿ ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಮಂಜೂರಾಗಿರುವ ಅಂಶಿಕ ಸಾಮರ್ಥ್ಯವಾದ 60.15 ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು 300 ಮೆ.ವ್ಯಾ.ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 302 ಎನ್‌ಸಿಇ 2006 ದಿನಾಂಕ: 16.10.2006.

2) ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 302 ಎನ್‌ಸಿಇ 2011 ದಿನಾಂಕ: 07.1.2012.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/VWILLP-(60.15 to 300 MW)/2013/1206 ದಿನಾಂಕ: 22/23.05.2013.

4) ದಿನಾಂಕ 11.3.2013ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಗೆ ಕೋಲಾರ, ತುಮಕೂರು, ದಾವಣಗೆರೆ, ಬೆಂಗಳೂರು ಗ್ರಾಮೀಣ, ಹಾಸನ, ಶಿವಮೊಗ್ಗ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಒಟ್ಟು 477.36 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು ಮತ್ತು ಮೇಲೆ ಕ್ರಮ ಸಂಖ್ಯೆ (2) ರ ತಿದ್ದುಪಡಿ ಆದೇಶದಲ್ಲಿ ಮೇಲಿನ ಆದೇಶ ಭಾಗದ ಕ್ರಮ ಸಂಖ್ಯೆ (4)ರಲ್ಲಿ ನಮೂದಿಸಲಾಗಿರುವ ಅಯ್ಯನ ಹಳ್ಳಿ, ಬೀಶನಹಳ್ಳಿ, ಹೊಸಹಳ್ಳಿ, ಮಾರಿಕಟ್ಟೆ, ನಿಂಬಳಗೇರೆ, ದಾವಣಗೆರೆ ಜಿಲ್ಲೆ ಎಂಬುದರ ಬದಲಾಗಿ ಅಯ್ಯನ ಹಳ್ಳಿ, ಬೀಶನಹಳ್ಳಿ, ಹೊಸಹಳ್ಳಿ, ಮಾರಿಕಟ್ಟೆ, ದಾವಣಗೆರೆ ಜಿಲ್ಲೆ ಮತ್ತು ನಿಂಬಳಗೇರೆ, ಬಳ್ಳಾರಿ ಜಿಲ್ಲೆ ಎಂದು ತಿದ್ದುಪಡಿಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ಕಂಪನಿಯವರಿಗೆ ಕೋಲಾರ, ತುಮಕೂರು, ದಾವಣಗೆರೆ, ಬೆಂಗಳೂರು ಗ್ರಾಮೀಣ, ಹಾಸನ, ಶಿವಮೊಗ್ಗ, ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 477.36 ಮೆ.ವ್ಯಾ ಸಾಮರ್ಥ್ಯದ ಯೋಜನೆಯಲ್ಲಿ ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಮಂಜೂರಾಗಿರುವ ಅಂಶಿಕ ಸಾಮರ್ಥ್ಯವಾದ 60.15 (51.90 + 8.25) ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು 300.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಕುರಿತಂತೆ ಸದರಿ ಯೋಜನೆಗೆ ಅವಶ್ಯಕವಾದ ಭೂಮಿಯು ಖಾಸಗಿ, ಅರಣ್ಯ ಮತ್ತು ಕಂದಾಯ ಜಮೀನಾಗಿರುವುದಾಗಿ, ಕೋರಿರುವ ಹೆಚ್ಚುವರಿ ಸಾಮರ್ಥ್ಯಕ್ಕೆ ಈ ಹಿಂದೆ ಪ್ರಸ್ತಾಪಿಸಿರುವ ಸ್ಥಳದಲ್ಲಿಯೇ ಹೆಚ್ಚಿನ ಸಾಮರ್ಥ್ಯಗಳ ಟರ್ಬೈನ್‌ಗಳನ್ನು ಅಳವಡಿಸುವುದಾಗಿ ತಿಳಿಸಿ, ಸಾಮರ್ಥ್ಯ ಹೆಚ್ಚಳ ಶುಲ್ಕದ ಬಾಬ್ತು ಬಾಕಿ ಇರುವ ₹1,63,83,500.00ಗಳನ್ನು ಕೆ.ಆರ್.ಇ.ಡಿ.ಎಲ್. ಸಂಸ್ಥೆಗೆ ಪಾವತಿಸುವ ಮತ್ತು ಉತ್ಪಾದನೆ ಆಗುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮುಖಾಂತರ 3ನೇ ವ್ಯಕ್ತಿಗೆ ಮಾರಾಟಮಾಡುವ ಮತ್ತು ಸ್ವಂತ ಬಳಕೆಗಾಗಿ ಉಪಯೋಗಿಸಿಕೊಳ್ಳುವ/ಪಿಪಿಎ/ಆರ್‌ಇಸಿ ಮಾಡಿಕೊಳ್ಳುವ ಹಾಗೂ ಈ ಯೋಜನೆಯ ಒಟ್ಟು ಸಾಮರ್ಥ್ಯದಲ್ಲಿ 200 ಮೆ.ವ್ಯಾ. ಸಾಮರ್ಥ್ಯವನ್ನು 2013ರೊಳಗೆ ಮತ್ತು ಉಳಿದ ಸಾಮರ್ಥ್ಯವನ್ನು 2014ರ ಅಂತ್ಯದ ಒಳಗೆ

ಅನುಷ್ಠಾನಗೊಸುವ ಷರತ್ತಿಗೊಳಪಟ್ಟು ದಿನಾಂಕ 11.03.2013ರ ಹಂಚಿಕೆ ಸಮಿತಿಯ ನಿರ್ಣಯದಂತೆ ಸಾಮರ್ಥ್ಯವನ್ನು ಹೆಚ್ಚಿಸಬಹುದೆಂಬ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (4)ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್‌ಪಿ ರವರಿಗೆ ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಯ ಜೋಗಿಹಳ್ಳಿ ಪ್ರಾಜೆಕ್ಟ್‌ನ ವಿವಿಧ ಗ್ರಾಮಗಳಲ್ಲಿ ಈಗಾಗಲೇ ಹಂಚಿಕೆಯಾಗಿರುವ 60.15 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 300 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸುವ ಕುರಿತು ಅಭಿವೃದ್ಧಿದಾರರು ಬಾಕಿ ಉಳಿಸಿಕೊಂಡಿರುವ ಅರ್ಜಿ ಮತ್ತು ಡಿಪಿಆರ್ ಶುಲ್ಕವನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸುವ ಷರತ್ತಿಗೊಳಪಟ್ಟು ಪ್ರಸ್ತಾವನೆಗೆ ಸಮಿತಿಯು ಅನುಮೋದನೆ ನೀಡಿರುತ್ತದೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 128 ಎನ್‌ಸಿಇ 2013, ಬೆಂಗಳೂರು, ದಿನಾಂಕ: 30.05.2013.**

ಮೆ : ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್‌ಪಿ ಕಂಪನಿಯವರಿಗೆ ಕೋಲಾರ, ತುಮಕೂರು, ದಾವಣಗೆರೆ, ಬೆಂಗಳೂರು ಗ್ರಾಮೀಣ, ಹಾಸನ, ಶಿವಮೊಗ್ಗ, ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಗಳ ವಿವಿಧ ಗ್ರಾಮಗಳಲ್ಲಿ ಹಂಚಿಕೆಯಾಗಿರುವ 477.36 ಮೆ.ವ್ಯಾ ಸಾಮರ್ಥ್ಯದ ಆದೇಶದ ಕ್ರಮ ಸಂಖ್ಯೆ (4)ರಲ್ಲಿ ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಮಂಜೂರಾಗಿರುವ ಅಂಶಿಕ ಸಾಮರ್ಥ್ಯವಾದ 60.15 (51.90 + 8.25) ಮೆ.ವ್ಯಾ. ಪವನ ವಿದ್ಯುತ್ ಯೋಜನೆಯನ್ನು 300.00 ಮೆ.ವ್ಯಾ. ಸಾಮರ್ಥ್ಯಕ್ಕೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ಹೆಚ್ಚಿಸಿ ಆದೇಶಿಸಲಾಗಿದೆ:–

**SHEDULE**

| Sl No. | Geographical Area details | Sanctioned capacity in MW | Enhancement proposed in MW | Total Capacity in MW (No. of WTGs & rating in KW) |
|---|---|---|---|---|
| 1 | The proposed place is a very vast area comprising of forests, Non-forest hills and high plains. The area is having eucalyptus plantation agricultural activities and is situated in Anaburu SF, Nimbalagiri RF and Snivkalu RF. The major orientation of the area is in the North south direction and is held between several villages as described in column 4. The area has several number of peaks and is held in the following Geographical co-ordinates:<br>**Latitude**: 14°34'36"- 14°45'0" N<br>**Longitude**: 76°20'0"- 76°27'26" E<br>**Ridge peaks:** 671, 696, 808, 772, 683, 788, 765, 665, 683, 693, 664, 681, 685, 711, 691, 730 and 794m Amsl. | 51.90MW<br>(70x330kW)<br>(48x600kW) | 239.85 | 300MW (375x800 KW) |
| 2 | Identified area is situated on the North east of Kenchenahalli and has non-contiguous ridges with an open scrub feature. It has 4 peaks and is covered in the following Geographical co-ordinates:<br>**Latitude**: 14°33'3"- 14°36'40" N<br>**Longitude**: 76°17'54"- 76°20'54" E<br>**Ridge peaks:** 739, 745 and 730m Amsl. | 8.25MW<br>(25x330kW) | | |
| | **TOTAL** | **60.15 MW** | **239.85 MW** | **300 MW** |

1 **ಮೆ::** ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್‌ಪಿ ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.

2 **ಮೆ::** ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್‌ಪಿ ರವರು ಉತ್ಪಾದಿಸುವ ವಿದ್ಯುತ್ತನ್ನು ವೀಲಿಂಗ್ ಮತ್ತು ಬ್ಯಾಂಕಿಂಗ್ ಮೂಲಕ 3ನೇ ವ್ಯಕ್ತಿಗೆ ಮಾರಾಟಮಾಡಲು ಮತ್ತು ಸ್ವಂತಕ್ಕೆ ಬಳಸಿಕೊಳ್ಳಲು/ಪಿಪಿಎ/ಆರ್‌ಇಸಿ ಮುಖಾಂತರ ಮಾಡಿಕೊಳ್ಳಲು ಅನುಮತಿಸಿದೆ.

3 **ಮೆ::** ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್ಎಲ್‌ಪಿ ರವರು ಯೋಜನೆಯ ಒಟ್ಟು ಸಾಮರ್ಥ್ಯದಲ್ಲಿ 200 ಮೆ.ವ್ಯಾ. ಸಾಮರ್ಥ್ಯವನ್ನು 2013ರೊಳಗೆ ಮತ್ತು ಉಳಿದ ಸಾಮರ್ಥ್ಯವನ್ನು 2014ರ ಅಂತ್ಯದ ಒಳಗೆ ಅನುಷ್ಠಾನಗೊಳಿಸತಕ್ಕದ್ದು.

4 ಮೆ:: ವಿಶ್ ವಿಂಡ್ ಇನ್ಫ್ರಾಸ್ಟ್ರಕ್ಚರ್ ಎಲ್‌ಎಲ್‌ಪಿ ರವರು ಸಾಮರ್ಥ್ಯ ಹೆಚ್ಚಳಕ್ಕೆ ಸಂಬಂಧಿಸಿದಂತೆ ಪಾವತಿಸಬೇಕಾದ ಬಾಕಿ ಶುಲ್ಕ ಮೊತ್ತ ₹ 1,63,83,500.00ಗಳನ್ನು ಕೆ.ಆರ್.ಇ.ಡಿ.ಎಲ್.ಗೆ ಪಾವತಿಸತಕ್ಕದ್ದು.

5 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

PR.1026

SC.25

## ಇಂಧನ ಸಚಿವಾಲಯ

**ವಿಷಯ:** M/s. J.N. Investments & Trading Co. Pvt. Ltd. ಕಂಪನಿಯವರಿಗೆ ಮಂಜೂರಾಗಿರುವ 77.6 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 41 ಎನ್‌ಸಿಇ 2006 ದಿನಾಂಕ: 20.04.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 400 ಎನ್‌ಸಿಇ 2010(1) ದಿನಾಂಕ: 27.09.2010.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2011 ದಿನಾಂಕ: 23.03.2011.
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 148 ಎನ್‌ಸಿಇ 2011 ದಿನಾಂಕ: 04.7.2011.
5) ಸರ್ಕಾರಿ ಆದೇಶ ಸಂಖ್ಯೆ: ಇಎನ್ 333 ಎನ್‌ಸಿಇ 2012 ದಿನಾಂಕ: 12.02.2013.
6) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/JNI-27.2 MW to 77.6 MW/ 2013/680 ದಿನಾಂಕ: 18.03.2013 ಮತ್ತು ಕೆಆರ್‌ಇಡಿ/08/JNI-27.2 MW to 77.6 MW/2013/1208 ದಿನಾಂಕ: 20/24.05.2013.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ M/s. J.N. Investments & Trading Co. Pvt. Ltd. ಕಂಪನಿಗೆ ಧಾರವಾಡ ಮತ್ತು ಗದಗ ಜಿಲ್ಲೆಗಳ ವಿವಿಧ ಪ್ರದೇಶಗಳಲ್ಲಿ ಒಟ್ಟು 84.84. ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು. ಮೇಲಿನ ಒಟ್ಟು ಸಾಮರ್ಥ್ಯದಲ್ಲಿ ಗದಗ್ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲಸಮುದ್ರ ಗ್ರಾಮಗಳಲ್ಲಿ ಹಂಚಿಕೆಯಾಗಿದ್ದ ಭಾಗಶಃ ಸಾಮರ್ಥ್ಯವಾದ 6.93 ಮೆ.ವ್ಯಾ. ಸಾಮರ್ಥ್ಯವನ್ನು 8.00 ಮೆ.ವ್ಯಾ.ಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಿ ಆದೇಶಿಸಲಾಗಿತ್ತು. ಸದರಿ ಸಾಮರ್ಥ್ಯವನ್ನು ಮೇಲೆ ಕ್ರಮ ಸಂಖ್ಯೆ (3) ಹಾಗೂ (4)ರಲ್ಲಿ ಓದಲಾಗಿರುವ ಆದೇಶಗಳಲ್ಲಿ ಕ್ರಮವಾಗಿ 15.2 ಮೆ.ವ್ಯಾ. ಸಾಮರ್ಥ್ಯಕ್ಕೆ ಹಾಗೂ 27.2 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ M/s. J.N. Investments & Trading Co. Pvt. Ltd. ಇವರಿಗೆ ಗದಗ್ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲಸಮುದ್ರ ಗ್ರಾಮಗಳಲ್ಲಿ ಮಂಜೂರಾಗಿರುವ 27.2 ಮೆ.ವ್ಯಾ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 77.6 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಸದರಿ ಯೋಜನೆಯನ್ನು ದಿನಾಂಕ 31.3.2013ರೊಳಗೆ ಅನುಷ್ಠಾನಗೊಳಿಸತಕ್ಕದ್ದೆಂದು ಆದೇಶಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s. J.N. Investments & Trading Co. Pvt. Ltd. ಕಂಪನಿಯವರಿಗೆ ಗದಗ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲಸಮುದ್ರ ಗ್ರಾಮಗಳಲ್ಲಿ ಮಂಜೂರಾಗಿರುವ 77.6 ಮೆ.ವ್ಯಾ. ಸಾಮರ್ಥ್ಯದಲ್ಲಿ ಈಗಾಗಲೇ 27.2 ಮೆ.ವ್ಯಾ. ಸಾಮರ್ಥ್ಯವನ್ನು ಅನುಷ್ಠಾನಗೊಳಿಸಿದ್ದು, ಸಾಮರ್ಥ್ಯ ಹೆಚ್ಚಳ ಯೋಜನೆಗೆ ಅವಶ್ಯವಿರುವ ಅನುಮೋದನೆಗಳನ್ನು ಪಡೆಯಲು ಸಾಕಷ್ಟು ಕಾಲಾವಕಾಶಬೇಕಾಗಿದ್ದು, ದಿನಾಂಕ 12.02.2013ರ ಆದೇಶದಲ್ಲಿ ಸೂಚಿಸಿರುವಂತೆ ಯೋಜನೆಯನ್ನು ದಿನಾಂಕ 31.3.2013ರೊಳಗೆ ಅನುಷ್ಠಾನಗೊಳಿಸಲು ಸಾಧ್ಯವಾಗದಿರುವುದರಿಂದ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಧಿಯನ್ನು ದಿನಾಂಕ 31.12.2013ರವರೆಗೆ ವಿಸ್ತರಿಸುವಂತೆ ಯೋಜನಾ ಅಭಿವೃದ್ಧಿದಾರರು ಕೋರಿರುವುದರಿಂದ ಕಾಲಾವಕಾಶ ವಿಸ್ತರಣೆ ಕೋರಿಕೆಯನ್ನು ಪರಿಗಣಿಸಬಹುದಾಗಿದೆಯೆಂದು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 333 ಎನ್‌ಸಿಇ 2012, ಬೆಂಗಳೂರು, ದಿನಾಂಕ: 01.06.2013.**

M/s. J.N. Investments & Trading Co. Pvt. Ltd. ಇವರಿಗೆ ಗದಗ ಜಿಲ್ಲೆಯ ಅಡವಿಸೋಮಾಪುರ, ಕಳಸಪುರ, ಮಲಸಮುದ್ರ ಗ್ರಾಮಗಳಲ್ಲಿ ಮಂಜೂರಾಗಿರುವ ಒಟ್ಟು 77.6 ಮೆ.ವ್ಯಾ. ಪವನ ವಿದ್ಯುತ್ ಯೋಜನಾ ಸಾಮರ್ಥ್ಯದಲ್ಲಿ ಅನುಷ್ಠಾನಗೊಳಿಸಲು ಬಾಕಿ ಇರುವ 50.4 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಅಂತಿಮವಾಗಿ ದಿನಾಂಕ 01.4.2013 ರಿಂದ ದಿನಾಂಕ 31.12.2013 ರವರೆಗೆ ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

PR.1027

SC.25

## ಇಂಧನ ಸಚಿವಾಲಯ

**ವಿಷಯ:** ಮೆ : ಜಿ.ವಿ.ಪಿ. ಇನ್ಫ್ರಾ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮಂಜೂರಾಗಿರುವ 10.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 439 ಎನ್‌ಸಿಇ 2006 ದಿನಾಂಕ: 13.03.2007.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 439 ಎನ್‌ಸಿಇ 2006 ದಿನಾಂಕ: 01.06.2007.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 254 ಎನ್‌ಸಿಇ 2007 ದಿನಾಂಕ: 17.07.2007.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-272/Durgahole MHS/2013/828 ದಿನಾಂಕ: 02.04.2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ:: ಶ್ರೀ ಕೆ. ಗಂಗಾ ಪ್ರಸಾದ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ದುರ್ಗಾ ಗ್ರಾಮದ ಬಳಿ ದುರ್ಗಾಹೊಳೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ದುರ್ಗಾಹೊಳೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ : ಕೆ. ಗಂಗಾ ಪ್ರಸಾದ ಕಂಪನಿಯ ಹೆಸರನ್ನು ಮೆ : ಜಿ.ವಿ.ಪಿ. ಇನ್ಫ್ರಾ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಆದೇಶಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 4.00 ಮೆ.ವ್ಯಾ. ನಿಂದ 10.00 ಮೆ.ವ್ಯಾ. ಸಾಮರ್ಥ್ಯಕ್ಕೆ ಹೆಚ್ಚಿಸಿ ಆದೇಶಿಸಲಾಗಿತ್ತು.

ಮೆ॥ ಜಿ.ವಿ.ಪಿ. ಇನ್ಫ್ರಾ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ದುರ್ಗಾ ಗ್ರಾಮದ ಬಳಿ ದುರ್ಗಾಹೊಳೆಗೆ ಅಡ್ಡಲಾಗಿ ಮಂಜೂರಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ದುರ್ಗಾಹೊಳೆ ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶವು ದಿನಾಂಕ 12.07.2012ಕ್ಕೆ ಮುಕ್ತಾಯಗೊಂಡಿದ್ದು, ಅಭಿವೃದ್ಧಿದಾರರು ಯೋಜನೆಗೆ ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ, ಫ್ಯಾಕ್ಟರೀಸ್ ಮತ್ತು ಬಾಯ್ಲರ್ಸ್ ಮತ್ತು ಮೀನುಗಾರಿಕೆ ಇಲಾಖೆಯ ಮಂಜೂರಾತಿಯನ್ನು ಹೊರತುಪಡಿಸಿ ಸಂಬಂಧಿಸಿದ ಎಲ್ಲಾ ಇಲಾಖೆಗಳಿಂದ ಅನುಮೋದನೆ ಪಡೆದಿರುತ್ತಾರೆಂದು ತಿಳಿಸುತ್ತಾ, ಯೋಜನೆಯನ್ನು ಅನುಷ್ಠಾನಗೊಳಿಸಲು ಅಭಿವೃದ್ಧಿದಾರರು ಆಸಕ್ತಿ ಹೊಂದಿರುವುದರಿಂದ, ದಿನಾಂಕ 13.07.2012 ರಿಂದ 12.07.2015 ರವರೆಗೆ ಕಾಲಾವಕಾಶ ವಿಸ್ತರಣಾ ಶುಲ್ಕ ಮತ್ತು ಪ್ರತಿ ಮೆಗಾ ವ್ಯಾಟ್‌ಗೆ ₹ 3.00 ಲಕ್ಷಗಳ Performance ಬ್ಯಾಂಕ್ ಗ್ಯಾರಂಟಿ ಪಾವತಿಸುವ ಷರತ್ತಿಗೊಳಪಟ್ಟು ಕಾಲಾವಕಾಶವನ್ನು ವಿಸ್ತರಿಸಬಹುದೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಶಿಫಾರಸ್ಸಿಸಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 129 ಎನ್‌ಸಿಇ 2013, ಬೆಂಗಳೂರು, ದಿನಾಂಕ: 10.06.2013.**

ಮೆ॥ ಜಿ.ವಿ.ಪಿ. ಇನ್ಫ್ರಾ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ದುರ್ಗಾ ಗ್ರಾಮದ ಬಳಿ ದುರ್ಗಾಹೊಳೆಗೆ ಅಡ್ಡಲಾಗಿ ಮಂಜೂರಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ದುರ್ಗಾಹೊಳೆ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ದಿನಾಂಕ 13.07.2012 ರಿಂದ ದಿನಾಂಕ 12.07.2015 ರವರೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸಿದೆ :–

1. ಅಭಿವೃದ್ಧಿದಾರರು ನಿಯಮಾನುಸಾರ ಕಾಲಾವಧಿ ವಿಸ್ತರಣಾ ಶುಲ್ಕವನ್ನು ಹಾಗೂ ಪ್ರತಿ ಮೆ.ವ್ಯಾ.ಗೆ ₹ 3.00 ಲಕ್ಷಗಳ ನೆರವೇರಿಕೆ ಖಾತರಿಯನ್ನು ಕೆ.ಆರ್.ಇ.ಡಿ.ಎಲ್. ಸಂಸ್ಥೆಗೆ ಪಾವತಿಸತಕ್ಕದ್ದು.
2. ಈ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ.ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ,

**PR.1029**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಪರ್ಲ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಷಣ್ಮುಖಸುಬ್ರಹ್ಮಣ್ಯ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆ.ಆರ್.ಇ.ಡಿ./06/SH-701/Shanmukhasubramanya MHS/940 ದಿನಾಂಕ: 22.03.2011 ಮತ್ತು ಕೆ.ಆರ್.ಇ.ಡಿ./06/SH-701/Shanmukhasubramanya MHS/1382 ದಿನಾಂಕ: 13/16.05.2011,
2) ದಿನಾಂಕ: 27.5.2011ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆ.ಆರ್.ಇ.ಡಿ./06/SH-701/Shanmukhasubramanya MHS/2349 ದಿನಾಂಕ: 08.08.2011 ಮತ್ತು ಕೆ.ಆರ್.ಇ.ಡಿ./06 /SH-701/Shanmukhasubramanya MHS/613 ದಿನಾಂಕ: 11.03.2013
4) ದಿನಾಂಕ: 11.3.2013ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಪರ್ಲ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮಂಗಳೂರು ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಪರ್ಲ ಶಂಭೂರಿ ಗ್ರಾಮದ ಹತ್ತಿರ ನೇತ್ರಾವತಿ ನದಿಯ ಎಡ ದಂಡೆಯ ಮಡಿಮುಗೇರು ತೊರೆಗೆ ಅಡ್ಡಲಾಗಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಷಣ್ಮುಖಸುಬ್ರಹ್ಮಣ್ಯ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಕುರಿತು ತಾಂತ್ರಿಕ ಮಾಹಿತಿಯನ್ನು ಒದಗಿಸುತ್ತಾ ಸದರಿ ಯೋಜನಾ ಪ್ರದೇಶವು ಈಗಾಗಲೇ ಹಂಚಿಯಾಗಿ ಅನುಷ್ಠಾನಗೊಂಡಿರುವ ಮೆ : ಎ.ಎಂ.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ರವರ 24.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಪ್ರದೇಶದಲ್ಲಿ ಬರುತ್ತಿದ್ದು, ಈ ಕುರಿತು ಮೆ : ಎ.ಎಂ.ಆರ್. ಪವರ್ ಪ್ರೈವೇಟ್ ಲಿಮಿಟೆಡ್ ರವರು ಸದರಿ ಪರ್ಲ ಯೋಜನೆಗೆ ತಮ್ಮ ಸಂಸ್ಥೆಯ ಭೂಮಿಯನ್ನು ನೀಡಲು ಒಪ್ಪಿಗೆ ಸೂಚಿಸಿರುವುದರಿಂದ ಹಾಗೂ ಸದರಿ ಯೋಜನಾ ಪ್ರದೇಶವು ಅರಣ್ಯ ಭೂಮಿಯನ್ನು ಒಳಗೊಳ್ಳುವುದಿಲ್ಲವೆಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸದರಿ ಸಭೆಯಲ್ಲಿ ಮೆ: ಪರ್ಲ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಸಂಬಂಧಿಸಿದಂತೆ ಯೋಜನಾ ಪ್ರದೇಶವು ಪಶ್ಚಿಮಘಟ್ಟ ಪ್ರದೇಶದಲ್ಲಿ ಬರುವುದರಿಂದ ಹಾಗೂ ಭೂಮಿಯು ಖಾಸಗಿ ಪ್ರದೇಶವಾದ್ದರಿಂದ ಈ ಪ್ರಸ್ತಾವನೆಯನ್ನು ಮೂಂದೂಡಲು ಹಂಚಿಕೆ ಸಮಿತಿಯು ನಿರ್ಣಯಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಪರ್ಲ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ರವರ ಮಂಗಳೂರು ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಶಂಭೂರಿ ಗ್ರಾಮದ ಪ್ರದೇಶದಲ್ಲಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಷಣ್ಮುಖಸುಬ್ರಹ್ಮಣ್ಯ ಕಿರು ಜಲ ವಿದ್ಯುತ್ ಯೋಜನಾ ಪ್ರದೇಶವು ಮೆ : ಎ.ಎಂ.ಆರ್. ಕಂಪನಿಗೆ ಸಂಬಂಧಿಸಿದ ಖಾಸಗಿ ಜಮೀನಾಗಿರುವುದಾಗಿ ತಿಳಿಸುತ್ತಾ, ಉಭಯ ಕಂಪನಿಗಳು ಯೋಜನಾ ಪ್ರದೇಶವನ್ನು ಬಳಸಿಕೊಳ್ಳಲು ಪರಸ್ಪರ ಒಪ್ಪಿರುವುದಾಗಿ ಭೂಮಿಯ ಸರ್ವೆ ಸಂಖ್ಯೆಗಳನ್ನು ಒದಗಿಸಿರುತ್ತಾರೆ. ಉಪ ಅರಣ್ಯ ಸಂರಕ್ಷಣಾಧಿಕಾರಿ, ಮಂಗಳೂರು ರವರು ದಿನಾಂಕ 13.02.2013ರ ಪತ್ರದಲ್ಲಿ ಯೋಜನಾ ಪ್ರದೇಶವು ಮೆ : ಎ.ಎಂ.ಆರ್. ಕಂಪನಿ ನೀಡಿರುವ ಜಾಗವು ಖಾಸಗಿ ಜಮೀನಾಗಿದ್ದು ಮೀಸಲು ಅರಣ್ಯ ಮತ್ತು ಡೀಮ್ಡ್ ಅರಣ್ಯಗಳ ವ್ಯಾಪ್ತಿಯಲ್ಲಿ ಬರುವುದಿಲ್ಲವೆಂದು ತಿಳಿಸಿರುವುದರಿಂದ ಪ್ರಸ್ತಾವನೆಯನ್ನು ಹಂಚಿಕೆ ಸಮಿತಿಯ ಮುಂದೆ ಅನುಮೋದನೆಗಾಗಿ ಸಲ್ಲಿಸುವಂತೆ ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ: ಪರ್ಲ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜಯು ಖಾಸಗಿ ಪ್ರದೇಶದಲ್ಲಿ ಬರುವುದನ್ನು ಪರಿಗಣಿಸಿ ಪ್ರಸ್ತಾವನೆಗೆ ಹಂಚಿಕೆ ಸಮಿತಿಯು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 188 ಎನ್‌ಸಿಇ 2011, ಬೆಂಗಳೂರು, ದಿನಾಂಕ: 21.05.2013.**

ಮೆ: ಪರ್ಲ ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ರವರಿಗೆ ಮಂಗಳೂರು ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಪರ್ಲ ಶಂಭೂರಿ ಗ್ರಾಮದ ಹತ್ತಿರ ನೇತ್ರಾವತಿ ನದಿಯ ಎಡ ದಂಡೆಯ ಮಡಿಮುಗೇರು ತೊರೆಗೆ ಅಡ್ಡಲಾಗಿ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಷಣ್ಮುಖಸುಬ್ರಹ್ಮಣ್ಯ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಭೌಗೋಳಿಕ ಸ್ಥಳದಲ್ಲಿ ಸ್ಥಾಪಿಸಲು ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ :–

| | Latitude | Longitude |
|---|---|---|
| Weir | 12°53'10'' | 75°05'40'' |
| FRL | EL 18.9 M | |
| TWL | EL 7.4 M | |

1 ಈ ಯೋಜನೆಯನ್ನು ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008 ದಿನಾಂಕ: 19.01.2010 ಹಾಗೂ ತಿದ್ದುಪಡಿ ಆದೇಶ ಸಂಖ್ಯೆ: ಇಎನ್ 07 ಎನ್‌ಸಿಇ 2011 ದಿನಾಂಕ 17.8.2011ರ ತಿದ್ದುಪಡಿ ಆದೇಶಗಳಲ್ಲಿ ನೀಡಿರುವ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.

2 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ :ಇಎನ್ 435 ಎನ್‌ಸಿಇ 2011 ದಿನಾಂಕ : 06.1.2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

3 ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

4 ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾ ವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣಾ ಶುಲ್ಕವನ್ನು ತುಂಬುವುದು.

5 ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲ ಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್ ಪಡೆಯತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

6 ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

7 ಯೋಜನಾ ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಗಳನುಸಾರ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳತಕ್ಕದ್ದು.

8 ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9 ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಅಥವಾ ಸರ್ಕಾರದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11 ವಿವರವಾದ ಯೋಜನಾ ವರದಿಯನ್ನು ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

12 ಈ ಯೋಜನೆಯನ್ನು ಅನುಷ್ಠಾನಗೊಳಿಸಿ, ವಿದ್ಯುತ್ ಜಾಲಕ್ಕೆ ಜೋಡನೆ ಮಾಡದ ಹೊರತು ವರ್ಗಾವಣೆ ಪ್ರಸ್ತಾವನೆಯನ್ನು ಪರಿಗಣಿಸಲಾಗುವುದಿಲ್ಲ.

13 ಸರ್ಕಾರಿ ಆದೇಶ ಸಂ: ಇಎನ್ 95 ಇಬಿಎಸ್ 2009 ದಿ:29.12.2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.

14 ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**PR.1021**
**SC.25**

## ಇಂಧನ ಸಚಿವಾಲಯ

**ವಿಷಯ:** ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಹಂಚಿಕೆಯಾಗಿರುವ 20 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯದಿಂದ ಅಂಶಿಕ 6.00 ಮೆ.ವ್ಯಾ. ಸಾಮರ್ಥ್ಯದ Part- B 3.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರಿಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 329 ಎನ್‌ಸಿಇ 2006 ದಿನಾಂಕ: 16.10.2006.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 154 ಎನ್‌ಸಿಇ 2008 ದಿನಾಂಕ: 03.06.2008.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GIWTL-3 MW (Part-B) to 48 MW (Prakruthi-20 MW)/2012/2216 ದಿನಾಂಕ: 24.07/08.08.2012 ಮತ್ತು KRED/08/GIWTL-3 to 48 MW /2012/164 ದಿನಾಂಕ: 18.01.2013.
4) ದಿನಾಂಕ 21.9.2012 ಹಾಗೂ 11.03.2013 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಪ್ರಕೃತಿ ಪವರ್ಸ್ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ, ದಾವಣಗೆರೆ ಮತ್ತು ಕೋಲಾರ ಜಿಲ್ಲೆಗಳಲ್ಲಿ 20.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ : ಪ್ರಕೃತಿ ಪವರ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ:: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ : ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ, ದಾವಣಗೆರೆ ಮತ್ತು ಕೋಲಾರ ಜಿಲ್ಲೆಗಳಲ್ಲಿ ಹಂಚಿಕೆಯಾಗಿರುವ 20.00 ಮೆ.ವ್ಯಾ. ಸಾಮರ್ಥ್ಯದಲ್ಲಿ ಹಂಚಿಕೆ ಆದೇಶದ ಕ್ರಮ ಸಂಖ್ಯೆ (1)ರಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ ಅಂಶಿಕ 6.00 ಮೆ.ವ್ಯಾ. ಸಾಮರ್ಥ್ಯದ Part-B 3.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರಿಗೆ ವರ್ಗಾಯಿಸಿ ಸದರಿ ಸಾಮರ್ಥ್ಯವನ್ನು 48.00 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಮತ್ತು ಸದರಿ ಯೋಜನಾ ಪ್ರದೇಶವು ಖಾಸಗಿ ಜಮೀನಾಗಿದ್ದು, ಉತ್ಪಾದನೆ ಆಗುವ ವಿದ್ಯುತ್ತನ್ನು ವಿದ್ಯುತ್ ಖರೀದಿ ಒಪ್ಪಂದದ ಮೂಲಕ ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಗೆ APPC Mode ರಡಿ ಸರಬರಾಜು ಮಾಡಲಾಗುವುದೆಂದು ಮತ್ತು ಯೋಜನೆಯನ್ನು 2013–14 ರೊಳಗಾಗಿ ಅನುಷ್ಠಾನಗೊಳಿಸಲಿರುವುದಾಗಿ ತಿಳಿಸಿರುತ್ತಾರೆ. ಅಲ್ಲದೆ, ಕಂಪನಿಯು ವರ್ಗಾವಣೆ ಶುಲ್ಕ ಮಾತ್ರ ಪಾವತಿಸಿದ್ದು, ಸಾಮರ್ಥ್ಯ ಹೆಚ್ಚಳ ಶುಲ್ಕವನ್ನು ಪಾವತಿಸಬೇಕಾಗಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ 11.3.2013ರಂದು ನಡೆದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಸಮಿತಿಯು ಪ್ರಸ್ತಾವನೆಯನ್ನು ಸವಿವರವಾಗಿ ಚರ್ಚಿಸಿ ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರು ಕೋರಿರುವಂತೆ 3.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರಿಗೆ ವರ್ಗಾಯಿಸಲು ಶಿಫಾರಸ್ಸಿಸಿದೆ ಹಾಗೂ ಸಾಮರ್ಥ್ಯ ಹೆಚ್ಚಳಕ್ಕೆ ಸಂಬಂಧಿಸಿದಂತೆ ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರು ಡಿಪಿಆರ್ ತಯಾರಿಸಿ ಸಲ್ಲಿಸಿದ ನಂತರ ಪ್ರಸ್ತಾವನೆಯನ್ನು ಪರಿಶೀಲಿಸಲು ಸರ್ಕಾರಕ್ಕೆ ಮರು ಸಲ್ಲಿಸುವಂತೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರಿಗೆ ಸೂಚಿಸಿದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 247 ಎನ್‌ಸಿಇ 2012, ಬೆಂಗಳೂರು, ದಿನಾಂಕ: 14.05.2013.**

ಮೆ: ಪ್ರಕೃತಿ ವಿಂಡ್ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರಿಗೆ ಚಿತ್ರದುರ್ಗ, ದಾವಣಗೆರೆ ಮತ್ತು ಕೋಲಾರ ಜಿಲ್ಲೆಗಳಲ್ಲಿ ಹಂಚಿಕೆಯಾಗಿರುವ 20.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಹಂಚಿಕೆ ಆದೇಶದ ಕ್ರಮ ಸಂಖ್ಯೆ (1)ರಲ್ಲಿ ದಾವಣಗೆರೆ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ ಅಂಶಿಕ 6.00 ಮೆ.ವ್ಯಾ. ಸಾಮರ್ಥ್ಯದ Part-B 3.00 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ **ವರ್ಗಾಯಿಸಿ** ಆದೇಶಿಸಿದೆ.

| Sl. No. | Transfered capacity in MW | Near by villages of the proposed area and district. | Geographical area description of the project |
|---|---|---|---|
| 1 | 3 MW<br>(5x600kW) | Ananthanahalli village,<br>Harapanahalli Taluk,<br>Davangere District. | **PART-B (3MW):**<br>**Latitude**: 14°45'0"- 14°46'30" N<br>**Longitude**: 75°56'33"- 76°0'0" E<br>**Ridge peaks:** 675, 682,641 & 684m Amsl |

ಮೆ:: ಗ್ರೀನ್ ಇನ್ಫ್ರಾ ವಿಂಡ್ ಟೆಕ್ನಾಲಜಿ ಲಿಮಿಟೆಡ್ ರವರು ವರ್ಗಾಯಿಸಿರುವ ಈ ಸಾಮರ್ಥ್ಯವನ್ನು ಹೆಚ್ಚಿಸುವ ಕುರಿತು ಡಿಪಿಆರ್‌ನ್ನು ಕೆ.ಆರ್.ಇ.ಡಿ.ಎಲ್.ಗೆ ಸಲ್ಲಿಸುವಂತೆ ಸೂಚಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವ/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ.ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ,

**PR.1016**

**SC.25**

## ಸಹಕಾರ ಸಚಿವಾಲಯ

**ವಿಷಯ :** ಬಿ.ಇ.ಎಮ್.ಎಲ್. ಕಾರ್ಮಿಕರ ಸಹಕಾರ ಸಂಘ ನಿಯಮಿತ ಬೆಂಗಳೂರು ಇದರ ಅವ್ಯವಹಾರದ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959 ಕಲಂ 64ರ ವಿಚಾರಣಾಧಿಕಾರಿ ಅವಧಿ ವಿಸ್ತರಣೆ ಬಗ್ಗೆ

**ಓದಲಾಗಿದೆ :** ಸಹಕಾರ ಸಂಘಗಳ ಅಪರ ನಿಬಂಧಕರ ಪತ್ರ ಸಂಖ್ಯೆ: ಹೆಚ್‌ಎಸ್‌ಜಿ–1/14/ಹೆಚ್‌ಹೆಚ್‌ಎಸ್/64/2013–14, ದಿನಾಂಕ: 24.05.2013. ಹಾಗೂ ದಿನಾಂಕ:13.08.2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಅಪರ ನಿಬಂಧಕರ ಪತ್ರಗಳಲ್ಲಿ ಬಿ.ಇ.ಎಮ್.ಎಲ್. ಕಾರ್ಮಿಕರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರಲ್ಲಿ ನಡೆದಿರುವ ಅವ್ಯವಹಾರಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣೆಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ಉಪನಿಬಂಧಕರು, ಕೇಂದ್ರ ವಲಯ ಬೆಂಗಳೂರು, ಇವರು ದಿನಾಂಕ:06.06.2012ರಂದು ಕಲಂ 64ರ ವಿಚಾರಣಾ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸಂಘದ ವಿಚಾರಣಾ ಅವಧಿಯ ದಿನಾಂಕ:10.05.2011 ರಿಂದ 09.11.2012 ರವರೆಗೆ ಒಟ್ಟು 18 ತಿಂಗಳ ಅವಧಿ ನೀಡಲಾಗಿತ್ತು. ಹಿಂದಿನ ವಿಚಾರಣಾಧಿಕಾರಿಗಳು ಈ ಪ್ರಕರಣದಲ್ಲಿ ಭಾಗಶಃ ವಿಚಾರಣೆ ನಡೆಸಿದ್ದು, ತದನಂತರ ಇವರಿಗಿರುವ ಅಲ್ಪಸಮಯವಾದ 5 ತಿಂಗಳ ಅವಧಿಯಲ್ಲಿ ಹೊಸದಾಗಿ ಸಂಘದ ಆಡಳಿತ ಮಂಡಳಿಯವರಿಗೆ ವಿಚಾರಣೆ ಸಂಬಂಧ ನೋಟಿಸ್ ನೀಡಿ ವಿವರಣೆಯನ್ನು ಹಾಗೂ ದಾಖಲಾತಿಗಳನ್ನು ಪಡೆದು ವಿಚಾರಣೆಯನ್ನು ಮುಕ್ತಾಯಗೊಳಿಸಿ ಅಂತಿಮ ವರದಿಯನ್ನು ದಿನಾಂಕ:17.12.2012ರಂದು ಸಲ್ಲಿಸಿರುತ್ತಾರೆ. ಕಲಂ 64ರ ವಿಚಾರಣಾ ವರದಿಯನ್ನು ಸಲ್ಲಿಸುವಲ್ಲಿ ವಿಳಂಬವಾಗಿದ್ದು, ಈ ವಿಳಂಬವನ್ನು ಮನ್ನಿಸಬೇಕೆಂದು ಕೋರಿಕೊಂಡಿದ್ದಾರೆ. ಮುಂದುವರೆದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 121 ರನ್ವಯ ಸರ್ಕಾರಕ್ಕೆ ದತ್ತವಾದ ಅಧಿಕಾರದನ್ವಯ ಕಲಂ 64ರ ವಿಚಾರಣಾ ಅವಧಿಯನ್ನು ದಿನಾಂಕ:10.11.2012 ರಿಂದ 17.12.2012ರವರೆಗೆ ವಿಸ್ತರಿಸಿ ಆದೇಶ ಹೊರಡಿಸುವಂತೆ ಕೋರಿಕೊಂಡಿದ್ದಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 67 ಸಿಎಲ್‌ಎಂ 2013, ಬೆಂಗಳೂರು, ದಿನಾಂಕ:28.10.2013.**

ಪ್ರಸಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಿ.ಇ.ಎಮ್.ಎಲ್. ಕಾರ್ಮಿಕರ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾಧಿಕಾರಿ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: **10.11.2012** ರಿಂದ **17.12.2012 ರವರೆಗೆ** ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

**ಸೂಚನೆ:**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2–ಎ)ರ ಉಪಬಂಧಕ್ಕೆ ಮಾಡಿದ ಮಾರ್ಪಾಟು ದಿನಾಂಕ: 17.12.2012ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2–ಎ) ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್. ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR.1087**

**SC.50**

## ಸಹಕಾರ ಸಚಿವಾಲಯ

**ವಿಷಯ:** 60ನೇ ಅಖಿಲ ಭಾರತ ಸಹಕಾರ ಸಪ್ತಾಹ ಆಚರಣೆ ಸಂಬಂಧ ಸಹಕಾರಿಗಳನ್ನು 2013ನೇ ವರ್ಷದ ಸಹಕಾರ ರತ್ನ ಪ್ರಶಸ್ತಿಗೆ ಆಯ್ಕೆ ಮಾಡಲು ರಾಜ್ಯ ಮಟ್ಟದ ಆಯ್ಕೆ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಇ 92 ಸಂಮಾಸ 2012, ದಿನಾಂಕ: 07.11.2012.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಅನಿ/ಕೈಸಸಂ–1/76/ಸ.ರತ್ನ/2013–14, ದಿನಾಂಕ: 23.08.2013.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ 2012ನೇ ವರ್ಷದ ಸಹಕಾರ ರತ್ನ ಪ್ರಶಸ್ತಿಗೆ ರಾಜ್ಯ ಮಟ್ಟದ ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ನವೆಂಬರ್ 2013ರಲ್ಲಿ ಜರುಗಲಿರುವ 60ನೇ ಅಖಿಲ ಭಾರತ ಸಹಕಾರ ಸಪ್ತಾಹ ಆಚರಣೆ ಪ್ರಯುಕ್ತ "ಸಹಕಾರ ರತ್ನ" ಪ್ರಶಸ್ತಿಗೆ ಶ್ರೇಷ್ಠ ಸಹಕಾರಿಗಳನ್ನು ಹಾಗೂ ಸಹಕಾರ ಇಲಾಖೆಯ ಅಧಿಕಾರಿಯನ್ನು ಗುರುತಿಸಿ ಆಯ್ಕೆ ಮಾಡಲು ರಾಜ್ಯ ಮಟ್ಟದ ಆಯ್ಕೆ ಸಮಿತಿಯನ್ನು ರಚಿಸಬೇಕೆಂದು ಕೋರಿರುತ್ತಾರೆ.

ಪ್ರಸ್ತಾವೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 98 ಸಂಮಾಸ 2013, ಬೆಂಗಳೂರು, ದಿನಾಂಕ: 21.10.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಹಕಾರ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿದ ಸಹಕಾರಿಗಳನ್ನು / ಅಧಿಕಾರಿಯನ್ನು ಗುರುತಿಸಿ 2013ನೇ ವರ್ಷದ "ಸಹಕಾರ ರತ್ನ" ಪ್ರಶಸ್ತಿಗೆ ಆಯ್ಕೆ ಮಾಡಲು ರಾಜ್ಯ ಮಟ್ಟದ ಆಯ್ಕೆ ಸಮಿತಿಯನ್ನು ಕೆಳಕಂಡಂತೆ ರಚಿಸಲಾಗಿದೆ.

| | | | |
|---|---|---|---|
| 01. | ಮಾನ್ಯ ಸಹಕಾರ ಸಚಿವರು | – | ಅಧ್ಯಕ್ಷರು |
| 02. | ಮಾನ್ಯ ಕೃಷಿ ರಾಜ್ಯ ಸಚಿವರು | – | ಸದಸ್ಯರು |
| 03. | ಅಧ್ಯಕ್ಷರು, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿಯಮಿತ, ಬೆಂಗಳೂರು | – | ಸದಸ್ಯರು |
| 04. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಸಹಕಾರ ಇಲಾಖೆ | – | ಸದಸ್ಯರು |
| 05. | ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು | – | ಸದಸ್ಯರು |
| 06. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿಯಮಿತ, ಬೆಂಗಳೂರು | – | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್. ನಾಗರಾಜಯ್ಯ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR.1086**
**SC.25**

## ಸಹಕಾರ ಸಚಿವಾಲಯ

**ವಿಷಯ :** 2013–14ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಅನುದಾನವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಓಟಿಎಸ್–2/ಲ್ಯಾಂಪ್ಸ್/76/2013–14, ದಿನಾಂಕ: 24.09.2013

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಸರ್ಕಾರದ ಆದೇಶ ಸಂಖ್ಯೆ:ಸಇ 72 ಆಂಆಸ(ಎ) 2013, ದಿನಾಂಕ:07.08.2013ರನ್ವಯ ರಾಜ್ಯ ಯೋಜನೆಯಡಿಯಲ್ಲಿ 2013–14ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯಗಳ ಸ್ಥಾಪನೆಗಾಗಿ 423 ಗಿರಿಜನ ಉಪ ಯೋಜನೆಯಡಿ ಲೆಕ್ಕ ಶೀರ್ಷಿಕೆ 2425–00–108–0–39ರ ಅಡಿಯಲ್ಲಿ ರೂ.25.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಲಾಗಿದೆ. ಈ ಬಗ್ಗೆ ದಿನಾಂಕ:26.08.2013ರ ರಾಜ್ಯ ಮಟ್ಟದ ಸಭೆಯಲ್ಲಿ, ಪ್ರಾಥಮಿಕ ಲ್ಯಾಂಪ್ಸ್ ಸಹಕಾರ ಸಂಘಗಳು ಆರ್ಥಿಕವಾಗಿ ಸದೃಢವಾಗಿ ತನ್ನ ಸದಸ್ಯರ ಅಭಿವೃದ್ಧಿಗೆ ಪೂರಕವಾಗಿ ಕಾರ್ಯ ನಿರ್ವಹಿಸಲು ಅನುವಾಗುವಂತೆ ವ್ಯಾಪಾರ ಅಭಿವೃದ್ಧಿಗೊಳಿಸಲು ಮಾರುಕಟ್ಟೆ ಸೌಕರ್ಯಗಳ ಸ್ಥಾಪನೆಗಾಗಿ ಈ ವರ್ಷದಲ್ಲಿ ಲಭ್ಯವಿರುವ ರೂ.25.00 ಲಕ್ಷಗಳ ಅನುದಾನವನ್ನು ಈ ಕೆಳಗಿನ ನಾಲ್ಕು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ನೀಡಬೇಕೆಂದು ತೀರ್ಮಾನಿಸಿರುವುದಾಗಿ ತಿಳಿಸಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

1. ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ, ಈ ಸಹಕಾರ ಸಂಘವು ಈಗಾಗಲೇ ನಿರ್ಮಿಸಿರುವ ಕಟ್ಟಡದ ಕಾಮಗಾರಿಯ ಉಳಿದ ಕೆಲಸಗಳಾದ ನೆಲಕ್ಕೆ ಟೈಲ್ಸ್ ಹಾಸಲು, ಕಿಟಕಿ ಬಾಗಿಲು ಮೊದಲಾದ ಕೆಲಸಗಳಿಗೆ ರೂ.10.00 ಲಕ್ಷಗಳ ಆರ್ಥಿಕ ಸಹಾಯಧನ ಕೋರಿ ಸಲ್ಲಿಸಿರುವ ಸದರಿ ಸಂಘದ ಪ್ರಸ್ತಾವೆಯನ್ನು ಪರಿಶೀಲಿಸಿ, ಸಹಕಾರ ಸಂಘಗಳ ನಿಬಂಧಕರು ರೂ.3.00 ಲಕ್ಷ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

2. ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಕೊಪ್ಪ ಚಿಕ್ಕಮಗಳೂರು ಜಿಲ್ಲೆ ಈ ಸಹಕಾರ ಸಂಘವು 150 ಕೆ.ಜಿ. ಸಾಮರ್ಥ್ಯದ ಜೇನು ಘಟಕವನ್ನು ಹೊಂದಿದ್ದು, ಅದನ್ನು 300 ಕೆ.ಜಿ. ಸಾಮರ್ಥ್ಯಕ್ಕೆ ಹೆಚ್ಚಿಸುವ ಸಲುವಾಗಿ ಹಾಲಿ ಇರುವ ಸಂಸ್ಕರಣಾ ಘಟಕವನ್ನು ನವೀಕರಿಸುವ ಸಲುವಾಗಿ ರೂ.9.00 ಲಕ್ಷಗಳ ಆರ್ಥಿಕ ಸಹಾಯಧನ ಮಂಜೂರು ಮಾಡುವಂತೆ ಕೋರಿ ಸಲ್ಲಿಸಿರುವ ಸದರಿ ಸಂಘದ ಪ್ರಸ್ತಾವೆ ಪರಿಶೀಲಿಸಿ, ಸಹಕಾರ ಸಂಘಗಳ ನಿಬಂಧಕರು ರೂ.8.00 ಲಕ್ಷ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.
3. ವನಶ್ರೀ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಹಳಿಯಾಳ, ಉತ್ತರ ಕನ್ನಡ ಜಿಲ್ಲೆ, ಈ ಸಂಘದ ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಲು ರೂ.10.00 ಲಕ್ಷಗಳ ಆರ್ಥಿಕ ಸಹಾಯಧನ ಮಂಜೂರು ಮಾಡುವಂತೆ ಕೋರಿ ಸಲ್ಲಿಸಿರುವ ಸದರಿ ಸಂಘದ ಪ್ರಸ್ತಾವೆ ಪರಿಶೀಲಿಸಿ, ಸಹಕಾರ ಸಂಘಗಳ ನಿಬಂಧಕರು ರೂ.7.00 ಲಕ್ಷ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.
4. ಗುಂಡ್ಲುಪೇಟೆ ತಾಲ್ಲೂಕು ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿ., ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ, ಈ ಸಂಘದ ಆವರಣದಲ್ಲಿ ಕಿರು ಅರಣ್ಯ ಉತ್ಪನ್ನ ಶುದ್ಧೀಕರಣ ಮತ್ತು ಶೇಖರಣೆ ಸಂಬಂಧ ಗೋದಾಮು ನಿರ್ಮಾಣ ಮಾಡಲು ರೂ.20.00 ಲಕ್ಷಗಳ ಆರ್ಥಿಕ ಸಹಾಯಧನ ಮಂಜೂರು ಮಾಡುವಂತೆ ಕೋರಿ ಸಲ್ಲಿಸಿರುವ ಸದರಿ ಸಂಘದ ಪ್ರಸಾವೆ ಪರಿಶೀಲಿಸಿ, ಸಹಕಾರ ಸಂಘಗಳ ನಿಬಂಧಕರು ರೂ.7.00 ಲಕ್ಷ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ದಿನಾಂಕ: 10.05.2013ರ ಆರ್ಥಿಕ ಇಲಾಖೆಯ ಆದೇಶದಂತೆ ಯೋಜನೆಯ ವಾರ್ಷಿಕ ಒಟ್ಟು ಅವಕಾಶದ ಶೇಕಡಾ 50% ಬಿಡುಗಡೆ ಮಾಡಲು ಅವಕಾಶ ಇರುತ್ತದೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 104 ಸಂಮಾಸ 2013, ಬೆಂಗಳೂರು, ದಿನಾಂಕ: 11.10.2013**

ರಾಜ್ಯ ಯೋಜನೆಯಡಿಯಲ್ಲಿ 2013-14ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಮಾರುಕಟ್ಟೆ ಮೂಲಭೂತ ಸೌಕರ್ಯಗಳ ಸ್ಥಾಪನೆಗಾಗಿ ಗಿರಿಜನ ಉಪ ಯೋಜನೆಯಡಿ **ಲೆಕ್ಕ ಶೀರ್ಷಿಕೆ 2425-00-108-0-39-423 ರ** ಅಡಿಯಲ್ಲಿ ರೂ 25.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಿದ್ದು, ಇದರಲ್ಲಿ ಮೊದಲನೇ ಹಾಗೂ ಎರಡನೇ ಕಂತಿನಲ್ಲಿ ನಾಲ್ಕು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ **ಒಟ್ಟು ರೂ.12.50 ಲಕ್ಷ** (ಹನ್ನೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಬಿಡುಗಡೆಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಲ್ಯಾಂಪ್ಸ್ ಸಹಕಾರ ಸಂಘಗಳ ಹೆಸರು | ಮೊದಲ ಹಾಗೂ ಎರಡನೇ ಕಂತಿನಲ್ಲಿ ಬಿಡುಗಡೆಗೊಳಿಸಿದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 01 | **ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಮೂಡಿಗೆರೆ, ಚಿಕ್ಕಮಗಳೂರು ಜಿಲ್ಲೆ**<br>**ಉದ್ದೇಶ:** ಸಂಘದ ಕಟ್ಟಡದ ಕಾಮಗಾರಿ ಉಳಿದ ಕೆಲಸಗಳಾದ ನೆಲಕ್ಕೆ ಟೈಲ್ಸ್ ಹಾಕಲು, ಕಿಟಕಿ ಬಾಗಿಲು ಮುಂತಾದ ಕಾಮಗಾರಿ ಪೂರ್ಣಗೊಳಿಸಲು; | 1.50 |
| 02 | **ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ**<br>**ಉದ್ದೇಶ:** ಸಂಘವು 150 ಕೆ.ಜಿ. ಸಾಮರ್ಥ್ಯದ ಜೇನು ಘಟಕವನ್ನು ಹೊಂದಿದ್ದು, ಅದನ್ನು 300 ಕೆ.ಜಿ. ಸಾಮರ್ಥ್ಯಕ್ಕೆ ಹೆಚ್ಚಿಸುವ ಸಲುವಾಗಿ ಹಾಲಿ ಇರುವ ಸಂಸ್ಕರಣ ಘಟಕವನ್ನು ನವೀಕರಿಸಲು; | 4.00 |
| 03 | **ವನಶ್ರೀ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ ಹಳಿಯಾಳ, ಉತ್ತರ ಕನ್ನಡ ಜಿಲ್ಲೆ**<br>**ಉದ್ದೇಶ:** ಸಂಘದ ಕಟ್ಟಡದ ಕಾಮಗಾರಿಯನ್ನು ಪೂರ್ಣಗೊಳಿಸಲು; | 3.50 |
| 04 | **ಗುಂಡ್ಲುಪೇಟೆ ತಾಲ್ಲೂಕು ಗಿರಿಜನ ದೊಡ್ಡ ಪ್ರಮಾಣದ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ**<br>**ಉದ್ದೇಶ:** ಕಿರು ಅರಣ್ಯ ಉತ್ಪನ್ನ ಶುದ್ಧೀಕರಿಸಲು ಮತ್ತು ಶೇಖರಣೆ ಸಂಬಂಧ ಗೋದಾಮು ನಿರ್ಮಾಣ ಮಾಡಲು; | 3.50 |
| | **ಒಟ್ಟು** | **ರೂ.12.50 ಲಕ್ಷ** |

**ಷರತ್ತುಗಳು :**

1. ಈ ಅನುದಾನ ವೆಚ್ಚವನ್ನು **2013-14ನೇ ಸಾಲಿನ ಲೆಕ್ಕ ಶೀರ್ಷಿಕೆ 2425-00-108-0-39-423** ಗಿರಿಜನ ಉಪಯೋಜನೆ ಇದರಡಿಯಲ್ಲಿ ಭರಿಸತಕ್ಕದ್ದು.
2. ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳ ನಿಯಮಿತ, ಮೈಸೂರು ಇವರು ಯೋಜನೆಯಲ್ಲಿ ಪಡೆದ ಹಣವನ್ನು ಯೋಜನೆಯ ಪ್ರಗತಿಗನುಗುಣವಾಗಿ ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಬಿಡುಗಡೆ ಮಾಡುವುದು.
3. ದಿನಾಂಕ:26.08.2013ರ ರಾಜ್ಯ ಮಟ್ಟದ ಉನ್ನತಾಧಿಕಾರ ಸಮಿತಿಯಲ್ಲಿ ಅನುಮೋದನೆ ಪಡೆದಿರುವ ಪ್ರತಿಯನ್ನು ಒದಗಿಸುವುದು ಮತ್ತು ಲ್ಯಾಂಪ್ಸ್ ಸಹಕಾರ ಸಂಘಗಳು ಈ ಯೋಜನೆಯಲ್ಲಿ ಬಿಡುಗಡೆಯಾದ ಹಣವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು 2000 ಅನ್ನು ಪಾಲಿಸಿ ಕಾಮಗಾರಿಗಳನ್ನು ನಿರ್ವಹಿಸುವುದು.
4. ಸಹಕಾರ ಸಂಘಗಳ ನಿಬಂಧಕರು ಲ್ಯಾಂಪ್ಸ್ ಸಹಕಾರ ಸಂಘಗಳು ಮಾಡುವ ವೆಚ್ಚವನ್ನು ನಿಯತಕಾಲಿಕವಾಗಿ ಪರಾಮರ್ಶೆ ಮಾಡತಕ್ಕದ್ದು ಮತ್ತು ಅನುದಾನದ ವಿನಿಯೋಗದ ಬಗ್ಗೆ ಪ್ರಮಾಣ ಪತ್ರವನ್ನು ಪಡೆದು ಮಹಾಲೇಖಪಾಲರಿಗೆ ಮತ್ತು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಮಂಜೂರು ಮಾಡಿದ ಅನುದಾನ ರೂ.12.50 ಲಕ್ಷ (ಹನ್ನೆರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ಇವರು ಕರ್ನಾಟಕ ರಾಜ್ಯ ಲ್ಯಾಂಪ್ಸ್ ಸಹಕಾರ ಮಹಾಮಂಡಳದಿಂದ ಸ್ವೀಕೃತಿಯನ್ನು ಪಡೆದು ಮೇಲು ರುಜು ಮಾಡಿ ಖಜಾನೆಯಿಂದ ಹಣವನ್ನು ಡ್ರಾ ಮಾಡಿ ಮಹಾಮಂಡಳಕ್ಕೆ ಪಾವತಿಸಲು ಸಹಕಾರ ಸಂಘಗಳ ಉಪ ನಿಬಂಧಕರು, ಚಿಕ್ಕಮಗಳೂರು ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಹಾಗೂ ಚಾಮರಾಜನಗರ ಜಿಲ್ಲೆ ಇವರಿಗೆ ಅಧಿಕಾರ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್. ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR.1088**
**SC.50**

## ಸಹಕಾರ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕು ದಿದ್ದಿಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ ಇದರಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾಧಿಕಾರಿ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಂ 2011, ದಿನಾಂಕ: 26.05.2012.

2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಸಿಆರ್‌ಡಿ/ಕೆಎಂಈ–5/123/2013–14, ದಿನಾಂಕ: 14.08.2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕು ದಿದ್ದಿಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ ಇದರಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾಧಿಕಾರಿ ಅವಧಿಯನ್ನು ದಿನಾಂಕ:30.06.2012ರವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ (2)ರ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕು ದಿದ್ದಿಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತದಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣೆಗೆ ಸಂಬಂಧಿಸಿದಂತೆ ಗೌರವ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ. 18472/2012ಕ್ಕೆ ತಡೆಯಾಜ್ಞೆ ನೀಡಿರುವುದನ್ನು ದಿನಾಂಕ: 31.05.2013ರಂದು ಗೌರವ ಉಚ್ಚ ನ್ಯಾಯಾಲಯವು ಇತ್ಯರ್ಥಗೊಳಿಸಿರುತ್ತದೆ ಎಂದು ತಿಳಿಸಿರುತ್ತಾರೆ. ಮುಂದುವರೆದು, ನ್ಯಾಯಾಲಯದಲ್ಲಿ ತಡೆಯಾಜ್ಞೆ ಇದ್ದುದರಿಂದ ಪ್ರಕರಣ 64ರ ವಿಚಾರಣೆಯು ಪೂರ್ಣ ಸ್ಥಗಿತಗೊಂಡಿರುತ್ತದೆಯೆಂದು, ಸದರಿ ವಿಚಾರಣೆಯನ್ನು ಮುಂದುವರೆಸಲು ಅವಧಿ ವಿಸ್ತರಣೆ ಅತೀ ಅವಶ್ಯಕತೆಯಿರುತ್ತದೆಯೆಂದು, ಈ ವಿಚಾರಣೆ ಸಂಬಂಧ 10 ವರ್ಷಗಳ ಲೆಕ್ಕ ಪುಸ್ತಕಗಳನ್ನು ಪರಿಶೀಲಿಸಬೇಕಾಗಿದ್ದು, ವಿಚಾರಣೆಗೆ ಸುಮಾರು 12 ಅಂಶಗಳು ಒಳಗೊಂಡಿರುವುದರಿಂದ ಹೆಚ್ಚಿನ ಕಾಲಾವಕಾಶ ಅತಿ ಅವಶ್ಯವೆಂದು ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ತಿಳಿಸಿರುತ್ತಾರೆಂದು ಸಹಕಾರ ಸಂಘಗಳ ನಿಬಂಧಕರು ವರದಿಸಿರುತ್ತಾರೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾಧಿಕಾರಿಗಳ ಅವಧಿಯನ್ನು 18 ತಿಂಗಳುಗಳ ಕಾಲ ವಿಸ್ತರಿಸಬೇಕಾಗಿರುತ್ತದೆಂದು ತಿಳಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿ ಸರ್ಕಾರಕ್ಕೆ ದತ್ತವಾದ ಅಧಿಕಾರದನ್ವಯ ದಿನಾಂಕ:01.07.2012 ರಿಂದ ದಿನಾಂಕ:31.12.2013 ರವರೆಗೆ (ನ್ಯಾಯಾಲಯದಲ್ಲಿ ಬಾಕಿ ಇದ್ದ ಅವಧಿಯೂ ಸೇರಿದಂತೆ) ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾಧಿಕಾರಿಯ ಅವಧಿ ವಿಸ್ತರಿಸುವಂತೆ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಬರೆದ ಪ್ರಸ್ತಾವೆಯಲ್ಲಿ ಕೋರಿಕೊಂಡಿದ್ದಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಂ 2012, ಬೆಂಗಳೂರು, ದಿನಾಂಕ: 21.10.2013.**

ಪ್ರಸಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿದ್ದಿಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ, ದಿದ್ದಿಗಿ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ ಇದರ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ವಿಚಾರಣಾಧಿಕಾರಿ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರನ್ವಯ ಸರ್ಕಾರಕ್ಕೆ ದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 01.07.2012 ರಿಂದ **31.12.2013 ರವರೆಗೆ** (ನ್ಯಾಯಾಲಯದಲ್ಲಿ ಬಾಕಿ ಇದ್ದ ಅವಧಿಯೂ ಸೇರಿದಂತೆ) ವಿಸ್ತರಿಸಿ ಆದೇಶ ಹೊರಡಿಸಲಾಗಿದೆ.

**ಸೂಚನೆ:**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2–ಎ)ರ ಉಪಬಂಧಕ್ಕೆ ಮಾಡಿದ ಮಾರ್ಪಾಟು ದಿನಾಂಕ: 31.12.2013ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64(2–ಎ) ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಹೆಚ್.ಎಸ್. ನಾಗರಾಜಯ್ಯ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR.1089**
**SC.50**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಶ್ರೀ ಮನೋಹರ ಹೆಚ್. ಮೆರವಾಡೆ, ನೋಟರಿ, ಗದಗ ಕಂದಾಯ ತಾಲ್ಲೂಕು ಗದಗ ಜಿಲ್ಲೆ ಇವರ ಹೆಸರನ್ನು ನೋಟರಿ ಪಟ್ಟಿಯಿಂದ ಶಾಶ್ವತವಾಗಿ ತೆಗೆಯುವ ಬಗ್ಗೆ

**ಓದಲಾಗಿದೆ :**
1. ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರ ಪತ್ರ ದಿನಾಂಕ: 18–06–2012
2. ಸರ್ಕಾರದ ಪತ್ರ ಸಂಖ್ಯೆ: ಲಾ 165 ಎಲ್‌ಸಿಎಲ್ 2012, ದಿನಾಂಕ: 18–07–2012
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರ ಪತ್ರ ದಿನಾಂಕ: 22–09–2012

**ಪ್ರಸ್ತಾವನೆ :**

ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರು ಓದಲಾದ (1)ರ ದಿನಾಂಕ: 18–06–2012ರ ಪ್ರಸ್ತಾವನೆಯಲ್ಲಿ, ಶ್ರೀ ಮನೋಹರ ಹೆಚ್. ಮೆರವಾಡೆ, ನೋಟರಿ, ಗದಗ ಜಿಲ್ಲೆ ಇವರು ಸಾವಿರಾರು ಗಟ್ಟಲೆ ನೋಟರಿ ಬಗ್ಗೆ ಇ–ಸ್ಟಾಂಪನ್ನು ಸ್ಥಳೀಯ ಸೌಹಾರ್ದ ಪತ್ತಿನ ಸಂಘಗಳಲ್ಲಿ ಖರೀದಿಸಿ ಹಾಗೂ ಕೆಲವು ಸ್ಟಾಂಪನ್ನು ಜೆರಾಕ್ಸ್ ಮಾಡಿ ಖಾಲಿ ಬಿಳಿ ಈ ಸ್ಟಾಂಪಿನ ಮೇಲೆ ಸರಕಾರಿ ಮೊಹರು ಹಾಗೂ ತಮ್ಮ ಸಹಿಯನ್ನು ಹಾಕಿ ತಮ್ಮ ಏಜೆಂಟರ ಮುಖಾಂತರ ಮುಂಡರಗಿ, ಶಿರಹಟ್ಟಿ ಹಾಗೂ ಗದಗದಲ್ಲಿ ಸ್ಟಾಂಪವೆಂಡರ ಮುಖಾಂತರ ಮಾರಾಟ ಮಾಡುತ್ತಿದ್ದಾರೆಂದೂ, ಅವರ ಮೇಲೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಬೇಕೆಂದೂ ಹಾಗೂ ಬಿಳಿ ಖಾಲಿ ಇ–ಸ್ಟಾಂಪ್ ನೋಟರಿ ಸಹಿ ಇರುವುದನ್ನು ದಾಖಲೆಗಳ ಸಹಿತ ಕಿರಿಯ ನ್ಯಾಯವಾದಿಗಳ ಸಂಘ, ಗದಗ ಜಿಲ್ಲೆ ಇವರು ಸಲ್ಲಿಸಿರುವ ದೂರನ್ನು ಲಗತ್ತಿಸಿ ಸರ್ಕಾರಕ್ಕೆ ರವಾನಿಸಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ : 18–07–2012ರ ಸರ್ಕಾರದ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರಿಗೆ ಸದರಿ ಶ್ರೀ ಮನೋಹರ ಹೆಚ್. ಮೆರವಾಡೆ, ನೋಟರಿ ಇವರ ವಿರುದ್ಧ ಸ್ವೀಕೃತವಾದ ದೂರಿನ ಪ್ರತಿಗಳನ್ನು ಕಳುಹಿಸಿ, ಸದರಿಯವರ ಕಾರ್ಯವೈಖರಿ ಮತ್ತು ಫಿರ್ಯಾಧಿನಲ್ಲಿರುವ ಅಂಶಗಳ ಸತ್ಯಾಸತ್ಯತೆಯ ಬಗ್ಗೆ ಪರಿಶೀಲಿಸಿ ವರದಿ ಕಳುಹಿಸುವಂತೆ ಕೋರಲಾಗಿತ್ತು.

ಅದರಂತೆ, ಓದಲಾದ (3)ರ ದಿನಾಂಕ: 22–09–2012ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಜಿಲ್ಲೆ ಇವರು ಸದರಿ ಶ್ರೀ ಮನೋಹರ ಹೆಚ್. ಮೆರವಾಡೆ, ನೋಟರಿ ಇವರು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ನೋಟರಿ ಹುದ್ದೆಯನ್ನು ತಮ್ಮ ದಂಧೆಯನ್ನಾಗಿಸಿಕೊಂಡಿದ್ದಾರೆಂದೂ, ಇಂತಹ ನೋಟರಿಗಳು ಸಮಾಜಕ್ಕೆ ಕೆಡಕುಂಟು ಮಾಡುತ್ತಾರೆಂದು ಹಾಗೂ ನೋಟರಿಯವರು ಕರ್ತವ್ಯಲೋಪ ಎಸಗಿದ್ದಾರೆಂದು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(1)ರ ಪ್ರಕಾರ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 165 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ : 23ನೇ ಆಗಸ್ಟ್, 2013**

ಶ್ರೀ ಮನೋಹರ ಹೆಚ್. ಮೆರವಾಡೆ, ನೋಟರಿ, ಗದಗ ಜಿಲ್ಲೆ ಇವರು ಕರ್ತವ್ಯ ಲೋಪವೆಸಗಿರುವುದು ರುಜುವಾತಾದ ಕಾರಣ ನೋಟರಿ ನಿಯಮಗಳು 1956ರ ನಿಯಮ 13(12)(ಬಿ) (1)ರನ್ವಯ ಇವರ ಪ್ರಮಾಣ ಪತ್ರವನ್ನು ರದ್ದುಪಡಿಸಲಾಗಿದೆ ಹಾಗೂ ಶಾಶ್ವತವಾಗಿ ಇವರನ್ನು ನೋಟರಿಯಾಗಿ ನೇಮಕಾತಿ ಆಗದಂತೆ ತಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಕೆ. ಲಕ್ಷ್ಮೀನರಸಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**P.R. 1044**
**SC - 15**

## ಇಂಧನ ಸಚಿವಾಲಯ

**ವಿಷಯ :** ಬಂಡವಾಳ ಹೂಡಿಕೆದಾರರ ಸಮಾವೇಶ–2012ರಲ್ಲಿ ಒಡಂಬಡಿಕೆ ಮಾಡಿಕೊಂಡ ಇಂಧನ ಇಲಾಖೆಗೆ ಸಂಬಂಧಿಸಿದ ಯೋಜನೆಗಳ ಉಸ್ತುವಾರಿಗೆ ನಾಮ ನಿರ್ದೇಶನಗೊಂಡ ನೋಡಲ್ ಅಧಿಕಾರಿಗಳಿಗೆ ಅಧಿಕಾರ ನೀಡುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಸುತ್ತೋಲೆ ಸಂಖ್ಯೆ : ಸಿಐ 113 ಪ್ರಕಾ 2012, ದಿನಾಂಕ: 25–07–2012
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 01 ಪಿಎಸ್‌ಆರ್ 2011, ದಿನಾಂಕ: 24–12–2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದ ಅನ್ವಯ ಬಂಡವಾಳ ಹೂಡಿಕೆದಾರರ ಸಮಾವೇಶ–2012ರ ಆಯೋಜನೆಗಾಗಿ, ವ್ಯವಸ್ಥಾಪಕ ನಿರ್ದೇಶಕರು, ಪಿಸಿಕೆಎಲ್ ರವರನ್ನು ಸಮೀಕ್ಷಾಧಿಕಾರಿಯನ್ನಾಗಿ (Nodal Officer) ಹಾಗೂ ವಿಶೇಷಾಧಿಕಾರಿ ಸುಧಾರಣೆ, ಇಂಧನ ಇಲಾಖೆ ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್–1, ಇಎಂಸಿ ಶಾಖೆ, ಇಂಧನ ಇಲಾಖೆ ಇವರುಗಳನ್ನು ಸಮನ್ವಯಾಧಿಕಾರಿಗಳಾಗಿ (Coordinating Officer) ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸುತ್ತೋಲೆಯನ್ವಯ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು GIM-2012ರಲ್ಲಿ ಒಡಂಬಡಿಕೆ ಮಾಡಿಕೊಂಡ ಯೋಜನೆಗಳ ನಿರ್ವಹಣೆ ಮತ್ತು ಅನುಷ್ಠಾನಕ್ಕಾಗಿ ಇಂಧನ ಇಲಾಖೆಯಲ್ಲಿ ನೇಮಿಸಲ್ಪಟ್ಟ ನೋಡಲ್ ಅಧಿಕಾರಿಗೆ ಸಂಪೂರ್ಣ ಜವಾಬ್ದಾರಿ ಹಾಗೂ ಅಧಿಕಾರ ನೀಡುವ ಅಗತ್ಯವಿರುತ್ತದೆ.

GIM-2012ರ ಬಂಡವಾಳ ಹೂಡಿಕೆದಾರರ ಯೋಜನೆಗಳು ಪ್ರಮುಖವಾಗಿ ನವೀಕೃತ ಇಂಧನ ಮೂಲಗಳಿಗೆ ಸಂಬಂಧಿಸಿದಂತೆ ಮತ್ತು ಶಾಖೋತ್ಪನ್ನ ಹಾಗೂ ಅನಿಲ ಆಧಾರಿತ ಯೋಜನೆಗಳಾಗಿರುವುದರಿಂದ ವ್ಯವಸ್ಥಾಪಕ ನಿರ್ದೇಶಕರು, ಪಿಸಿಕೆಎಲ್ ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕ್ರೆಡೆಲ್ ರವರುಗಳು ಸಮನ್ವಯ ಸಾಧಿಸಿದಲ್ಲಿ ಯೋಜನೆಗಳ ಅನುಷ್ಠಾನವು ಸುಗಮವಾಗಿ ಸಾಗುವುದೆಂಬ ಅಂಶವನ್ನು ಪರಿಗಣಿಸಲಾಯಿತು.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 26 ವಿಎಸ್‌ಸಿ 2012, ಬೆಂಗಳೂರು, ದಿನಾಂಕ : 16ನೇ ಆಗಸ್ಟ್, 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಂಡವಾಳ ಹೂಡಿಕೆದಾರರ ಸಮಾವೇಶ–2012ರಲ್ಲಿ ಒಡಂಬಡಿಕೆ ಮಾಡಿಕೊಂಡಿರುವ ಇಂಧನ ಇಲಾಖೆಗೆ ಸಂಬಂಧಿಸಿದ ಯೋಜನೆಗಳ ನಿರ್ವಹಣೆ, ಉಸ್ತುವಾರಿ ಮತ್ತು ಅನುಷ್ಠಾನಕ್ಕಾಗಿ ಇಂಧನ ಇಲಾಖೆಯಿಂದ ನಾಮ ನಿರ್ದೇಶನಗೊಂಡ ನೋಡಲ್ ಅಧಿಕಾರಿಯಾದ ವ್ಯವಸ್ಥಾಪಕ ನಿರ್ದೇಶಕರು, ಪವರ್ ಕಂಪನಿ ಆಫ್ ಕರ್ನಾಟಕ ರವರಿಗೆ ಯೋಜನೆಗಳ ನಿರ್ವಹಣೆ, ಅನುಷ್ಠಾನದ ಸಂಪೂರ್ಣ ಜವಾಬ್ದಾರಿ ನೀಡಿ, ಆದೇಶಿಸಿದೆ.

2. ಈ ಆದೇಶದನ್ವಯ ನೋಡಲ್ ಅಧಿಕಾರಿಯವರು, ವ್ಯವಸ್ಥಾಪಕ ನಿರ್ದೇಶಕರು, KREDL ರವರೊಂದಿಗೆ ಸಮನ್ವಯ ಸಾಧಿಸಿ ನವೀಕೃತ ಇಂಧನ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಪಡೆದು ಕ್ರೋಢೀಕರಿಸಲೂ ಸಹ ಕೋರಲಾಗಿದೆ. ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು GIM-2012 ರಲ್ಲಿ ಒಡಂಬಡಿಕೆ ಮಾಡಿಕೊಂಡ ಯೋಜನೆಗಳನ್ನು ಉಸ್ತುವಾರಿ ಮಾಡಲು ಒಂದು Portal ಅನ್ನು ಸ್ಥಾಪಿಸಿದ್ದು, (http://G2B.advantagekarnataka.com) ಈ Portal ಮುಖೇನ ನೋಡಲ್ ಅಧಿಕಾರಿಯವರು ಯೋಜನೆಗಳ ಉಸ್ತುವಾರಿ ಮಾಡುವುದು ಕಡ್ಡಾಯವಾಗಿದೆ. ಇಲಾಖಾ ನೋಡಲ್ ಅಧಿಕಾರಿಗಳು on-line ಮೂಲಕ ಸ್ವೀಕರಿಸಿದ ಅರ್ಜಿಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ e-mail ಮೂಲಕ ಪರಿಶೀಲನೆ ಮತ್ತು ಮುಂದಿನ ಕ್ರಮಕ್ಕಾಗಿ ರವಾನಿಸಬೇಕಾಗಿರುತ್ತದೆ. ಈ ಸಂಬಂಧವಾಗಿ **ವ್ಯವಸ್ಥಾಪಕ ನಿರ್ದೇಶಕರು, ಪಿಸಿಕೆಎಲ್ ರವರಿಗೆ ಅರ್ಜಿಗಳನ್ನು ಸಂಬಂಧಪಟ್ಟವರಿಗೆ ರವಾನಿಸುವ ಅಧಿಕಾರವನ್ನು ನೀಡಲಾಗಿದೆ.**

3. GIM-2012 ರ ಯೋಜನೆಗಳ ಅನುಷ್ಠಾನ ಕಾರ್ಯದಲ್ಲಿ, **ನೋಡಲ್ ಅಧಿಕಾರಿಯವರು ಆದೇಶಿಸುವ ಸೂಚನೆಗಳನ್ನು ಇಂಧನ ಇಲಾಖೆಯಡಿಯಲ್ಲಿ ಬರುವ ಎಲ್ಲ ಸಂಸ್ಥೆಗಳೂ ಪಾಲಿಸುವಂತೆ ಮತ್ತು ಸಂಪೂರ್ಣ ಸಮನ್ವಯದೊಂದಿಗೆ ಸಹಕಾರ ನೀಡುವಂತೆ ಆದೇಶಿಸಲಾಗಿದೆ.**

4. Nodal ಅಧಿಕಾರಿಯವರ ವರ್ಗಾವಣೆ/ಬದಲಾವಣೆಯಾದ ಸಂದರ್ಭದಲ್ಲಿ ಉಸ್ತುವಾರಿಗೆ ಅಡಚಣೆಯಾಗದಂತೆ ನೂತನವಾಗಿ ಬರುವ ಅಧಿಕಾರಿಗೆ ಕಡ್ಡಾಯವಾಗಿ ಈ ನಿಟ್ಟಿನಲ್ಲಿ ಮಾಹಿತಿ ವರ್ಗಾವಣೆ ಮಾಡಬೇಕಾಗಿದೆ ಹಾಗೂ ಈ ಸಂಬಂಧ ಮಾಹಿತಿಯನ್ನು ಕೂಡಲೇ ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಯ ಗಮನಕ್ಕೆ ತರಬೇಕಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**PR 973**
**SC 25**

## ತೋಟಗಾರಿಕೆ ಸಚಿವಾಲಯ

**ವಿಷಯ** : ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ನೆಲ್ಲಿಗೆರೆ ತೋಟಗಾರಿಕೆ ಕ್ಷೇತ್ರದಲ್ಲಿನ 1.2 ಎಕರೆ ಜಮೀನನ್ನು ಬಸ್ ನಿಲ್ದಾಣ ಘಟಕ ನಿರ್ಮಿಸಲು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಹಸ್ತಾಂತರಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ತೋಇ 465 ತೋಇವಿ 2007, ದಿನಾಂಕ: 05–04–2012
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ತೋಇ/ತೋಅನಿ/ಕ್ಷೇನ/ಸತೋಅ–2/40/2007–08, ದಿನಾಂಕ: 28/11–05/06–06–2013

**ಸರ್ಕಾರದ ಆದೇಶ ಸಂಖ್ಯೆ : ತೋಇ 134 ತೋಇವಿ 2013, ಬೆಂಗಳೂರು, ದಿನಾಂಕ : 16ನೇ ಆಗಸ್ಟ್, 2013.**

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕಿನ ನೆಲ್ಲಿಗೆರೆ ತೋಟಗಾರಿಕೆ ಕ್ಷೇತ್ರದ 2.2 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಕೆಲವು ಷರತ್ತುಗಳೊಂದಿಗೆ ಹಸ್ತಾಂತರಿಸಲು ಆದೇಶಿಸಲಾಗಿತ್ತು. ಮೇಲೆ ಕ್ರ.ಸಂ. 2ರಲ್ಲಿ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ಸರ್ಕಾರದ ದಿನಾಂಕ: 05–04–2012ರ ಆದೇಶದನ್ವಯ 2.2 ಎಕರೆ ಜಮೀನು ಹಾಗೂ ಈ ಜಮೀನಿನಲ್ಲಿರುವ 1645 ಚ.ಅ. ಕಟ್ಟಡದ ಮೌಲ್ಯ ಸೇರಿ ರೂ. 37,40,250/– ಗಳನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರಿಂದ ಪಡೆದು ಭೂಮಿಯನ್ನು ವರ್ಗಾಯಿಸಲು ಉಪ ನಿರ್ದೇಶಕರು (ಜಿಪಂ) ಮೈಸೂರು ಇವರಿಗೆ ಸೂಚಿಸಿದ್ದು, ಆದರೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಹಾಗೂ ತಾಲ್ಲೂಕು ಭೂಮಾಪನ

ಇಲಾಖೆಯ ಕ್ಯಾಡ್ ಸರ್ವೆ ಪ್ರಕಾರ ಸರ್ವೆ ನಂ. 64/1ರ ಈ ಕ್ಷೇತ್ರದಲ್ಲಿನ 2.2 ಎಕರೆ ಜಮೀನಿನಲ್ಲಿ ರಸ್ತೆ ಅಗಲೀಕರಣ ಹಾಗೂ ರೈಲ್ವೆ ಗೇಜ್ ಪರಿವರ್ತನೆಗೆ 1 ಎಕರೆ ಜಮೀನನ್ನು ಉಪಯೋಗಿಸಿಕೊಳ್ಳಲಾಗಿದ್ದು ಪ್ರಸ್ತುತ 1.2 ಎಕರೆ ಜಮೀನು ಮಾತ್ರ ಲಭ್ಯವಿದೆ. ಆದ್ದರಿಂದ ದಿನಾಂಕ: 05–04–2012ರ ಆದೇಶವನ್ನು ರದ್ದುಪಡಿಸಿ ನಂಜನಗೂಡು ತಾಲ್ಲೂಕಿನ ನೆಲ್ಲಿಗೆರೆ ತೋಟಗಾರಿಕೆ ಕ್ಷೇತ್ರದಲ್ಲಿ ಪ್ರಸ್ತುತ ಲಭ್ಯವಿರುವ 1.2 ಎಕರೆ ಜಮೀನನ್ನು ಬಸ್ ಘಟಕ ನಿರ್ಮಾಣಕ್ಕಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಚಾಮರಾಜನಗರ ಇವರಿಗೆ ಹಸ್ತಾಂತರಿಸಲು ಪರಿಷ್ಕೃತ ಆದೇಶ ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ತೋಇ 465 ತೋಇವಿ 2007, ದಿನಾಂಕ: 05–04–2012ರ ಆದೇಶವನ್ನು ಹಿಂಪಡೆದು ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕಿನ ನೆಲ್ಲಿಗೆರೆ ತೋಟಗಾರಿಕೆ ಕ್ಷೇತ್ರದಲ್ಲಿ ಲಭ್ಯವಿರುವ 1.2 ಎಕರೆ ಜಮೀನನ್ನು ಬಸ್ ಘಟಕ ನಿರ್ಮಾಣಕ್ಕಾಗಿ ವಿಭಾಗೀಯ ನಿಯಂತ್ರಣಾಧಿಕಾರಿಗಳು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಚಾಮರಾಜನಗರ ವಿಭಾಗ, ಚಾಮರಾಜನಗರ ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಹಸ್ತಾಂತರಿಸಲು ಆದೇಶಿಸಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು**

1. ಭೂಮಿ ಮತ್ತು ಅಲ್ಲಿರುವ ಮೂಲಭೂತ ಸೌಕರ್ಯಗಳ ಮೌಲ್ಯವನ್ನು ಪ್ರಸ್ತುತ ಮಾರುಕಟ್ಟೆ ದರದಂತೆ ಪರಿಹಾರವನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಚಾಮರಾಜನಗರರವರು ತೋಟಗಾರಿಕೆ ಇಲಾಖೆಗೆ ಪಾವತಿಸತಕ್ಕದ್ದು.
2. ಬಸ್ ಘಟಕಕ್ಕಾಗಿ ನೀಡಬಹುದಾದ ಪ್ರದೇಶದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮರವರು ನಿರ್ಮಿಸುವ ವಾಣಿಜ್ಯ ಸಂಕೀರ್ಣ ಮಳಿಗೆಗಳಲ್ಲಿ ಇಲಾಖಾ ಮುಖಾಂತರ ಅಥವಾ ಇಲಾಖಾ ಅಂಗಸಂಸ್ಥೆಗಳ ಮುಖಾಂತರ ಆ ಭಾಗದ ರೈತಾಪಿ ಜನರಿಗೆ ಹಾಗೂ ಗ್ರಾಹಕರ ಅನುಕೂಲಕ್ಕಾಗಿ ಹಣ್ಣು ಮತ್ತು ತರಕಾರಿ ಮಾರಾಟ, ಪರಿಕರಗಳು ಹಾಗೂ ಔಷಧಿ ಮತ್ತು ಕೀಟನಾಶಕಗಳ ಮಾರಾಟ, ಇತ್ಯಾದಿಗಳನ್ನು ಮಾರಾಟ ಮಾಡುವ ಸಲುವಾಗಿ 4 ಮಳಿಗೆಗಳನ್ನು ಉಚಿತವಾಗಿ ತೋಟಗಾರಿಕೆ ಇಲಾಖೆಗೆ ಬಿಟ್ಟುಕೊಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ

PR 1071
SC 25

**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಬಿಸಿಡಬ್ಲ್ಯೂ 324 ಬಿಎಂಎಸ್ 2013, ಬೆಂಗಳೂರು, ದಿನಾಂಕ : 30ನೇ ಮೇ, 2013.**

ಸರ್ಕಾರಿ ಆದೇಶ ಸಂಖ್ಯೆ ಸಕಇ 206 ಬಿಎಂಎಸ್ 2012, ದಿನಾಂಕ: 23–06–2012ರ ಕ್ರಮಸಂಖ್ಯೆ (54)ರ ಕಾಲಂ (5)ರಲ್ಲಿರುವ ಮೆಟ್ರಿಕ್–ನಂತರದ ಪುರುಷರ ವಿದ್ಯಾರ್ಥಿನಿಲಯ, ವಿರಾಜಪೇಟೆ ಇಲ್ಲಿಗೆ ಎಂಬುದರ ಬದಲಾಗಿ ಮೆಟ್ರಿಕ್–ನಂತರದ ಮಹಿಳೆಯರ ವಿದ್ಯಾರ್ಥಿನಿಲಯ, ಆಲೂರು ಸಿದ್ದಾಪುರ ಗ್ರಾಮ, ಸೋಮವಾರಪೇಟೆ ತಾಲ್ಲೂಕು ಎಂದು ತಿದ್ದುಪಡಿ ಮಾಡಲಾಗಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಜಿ. ಮುಳಕೂರ,**
ಸರ್ಕಾರದ ಅಧೀನ ಕಾರ್ಯದರ್ಶಿ–2(ಪ್ರ),
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

PR 1073
SC 100

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯ ಅನುಷ್ಠಾನಕ್ಕಾಗಿ ಹೊಸದಾಗಿ ಸೃಜಿಸಲಾದ ಹಿರಿಯ ಆಹಾರ ಸುರಕ್ಷತಾಧಿಕಾರಿ ಗ್ರೇಡ್–II ಮತ್ತು ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು 'ಬಿ' ದರ್ಜೆಯ ಹುದ್ದೆಗಳೆಂದು ಪರಿಗಣಿಸುವ ಬಗ್ಗೆ

**ಓದಲಾಗಿದೆ :**
1. ಆಯುಕ್ತರು, ಆಹಾರ ಸುರಕ್ಷತಾ ಬೆಂಗಳೂರು, ಇವರ ಪತ್ರ ಸಂಖ್ಯೆ: ಸಾಆಸಂ/ಎಫ್ಎಸ್ಎಸ್ಎ/ಸಿ/30/2013–14, ದಿನಾಂಕ: 20–08–2013
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 73 ಸೇಇವಿ 2012, ದಿನಾಂಕ: 20–09–2013

**ಪ್ರಸ್ತಾವನೆ :**

ರಾಜ್ಯದಲ್ಲಿ ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯನ್ನು ಜಾರಿಗೊಳಿಸುವ ಉದ್ದೇಶದಿಂದ ಅವಶ್ಯವಿರುವ ಹುದ್ದೆಗಳನ್ನು ಸೃಜಿಸುವ/ಪದನಾಮೀಕರಿಸಿ ಹೊರಡಿಸಿದ ಸರ್ಕಾರದ ಆದೇಶ ಸಂಖ್ಯೆ: ಆಕುಕ 317 ಸಿಜಿಇ 2011, ದಿನಾಂಕ: 23–08–2012ರಲ್ಲಿ ಆಕುಕ ಇಲಾಖೆಯಲ್ಲಿದ್ದ

ರೂ. 21600–40050 ವೇತನ ಶ್ರೇಣಿಯ ಹಿರಿಯ ಆಹಾರ ನಿರೀಕ್ಷಕರ ಹುದ್ದೆಯನ್ನು ಹಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್–II ಎಂದು ಮರುಪದನಾಮಿಸಿದೆ ಹಾಗೂ ರೂ. 22800–43200 ವೇತನ ಶ್ರೇಣಿಯ ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು ಹೊಸದಾಗಿ ಸೃಜಿಸಲಾಗಿದೆ. ಈ ಹಿರಿಯ ಆಹಾರ ಸುರಕ್ಷತಾ ಅಧಿಕಾರಿ ಗ್ರೇಡ್–II ಮತ್ತು ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು 'ಬಿ' ದರ್ಜೆಯ ಪತ್ರಾಂಕಿತ ಅಧಿಕಾರಿಗಳೆಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ಸುರಕ್ಷತೆ ಇವರು ಕೋರಿದ್ದಾರೆ.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) (ತಿದ್ದುಪಡಿ) ನಿಯಮಗಳು, 2013ರಲ್ಲಿ ರೂ. 21600–40050 ಮತ್ತು ಅದಕ್ಕೂ ಮೇಲ್ಪಟ್ಟ ವೇತನ ಶ್ರೇಣಿಗಳನ್ನು ಆದರೆ ರೂ. 28100–50100ಕ್ಕಿಂತ ಕೆಳಗಿನ ವೇತನ ಶ್ರೇಣಿಯನ್ನು ಹೊಂದಿರುವ ಹುದ್ದೆಗಳನ್ನು ಸಮೂಹ 'ಬಿ' ಎಂದು ಪರಿಗಣಿಸಿದೆ.

ಈ ಹಿನ್ನೆಲೆಯಲ್ಲಿ ಆಯುಕ್ತರು, ಆಹಾರ ಸುರಕ್ಷತಾ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : 349 ಸಿಜಿಇ 2013, ಬೆಂಗಳೂರು, ದಿನಾಂಕ : 3ನೇ ಅಕ್ಟೋಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಹಾರ ಸುರಕ್ಷತಾ ಮತ್ತು ಗುಣಮಟ್ಟ ಕಾಯ್ದೆಯನ್ನು ರಾಜ್ಯದಲ್ಲಿ ಜಾರಿಗೊಳಿಸಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಕೆಲವೊಂದು ಹುದ್ದೆಗಳನ್ನು ಮರುಪದನಾಮಿಸಿದ ಹುದ್ದೆಗಳಲ್ಲಿ ಹಾಗೂ ಹೊಸದಾಗಿ ಸೃಜಿಸಲಾದ ಹುದ್ದೆಗಳಲ್ಲಿ ರೂ. 21600–40050 ವೇತನ ಶ್ರೇಣಿಯ ಹಿರಿಯ ಆಹಾರ ಸುರಕ್ಷತಾಧಿಕಾರಿ ಗ್ರೇಡ್– II ಹುದ್ದೆಗಳನ್ನು ಹಾಗೂ ರೂ. 22800–43200 ವೇತನ ಶ್ರೇಣಿಯ ಹಿರಿಯ ಆಹಾರ ಸುರಕ್ಷತಾಧಿಕಾರಿ ಹುದ್ದೆಗಳನ್ನು 'ಬಿ' ದರ್ಜೆಯ ಪತ್ರಾಂಕಿತ ಅಧಿಕಾರಿ ಹುದ್ದೆಗಳೆಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ನಾರಾಯಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಆರೋಗ್ಯ 1 ಮತ್ತು 2)

PR 1076

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ॥ ಹೆಚ್.ಎಸ್. ಸರಳ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೈವಾರ, ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ

**ಓದಲಾಗಿದೆ :** ಆಯುಕ್ತರು, ಆಕುಕ ಸೇವೆಗಳು ಇವರ ಪತ್ರ ಸಂಖ್ಯೆ: ಡಿಪಿಜಿ/ಬೆಂವಿ(2)/ಚಿಕ್ಕ/37/2010–11, ದಿನಾಂಕ: 27–11–12

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಡಾ॥ ಹೆಚ್.ಎಸ್. ಸರಳ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೈವಾರ, ಚಿಕ್ಕಬಳ್ಳಾಪುರ ಜಿಲ್ಲೆ ಇವರು ದಿನಾಂಕ: 10–03–2010ರಿಂದ ಇಂದಿನವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿಯಾಗಿರುತ್ತಾರೆ. ಸದರಿಯವರು ಖಾಯಂಪೂರ್ವ ಸೇವಾವಧಿಯಲ್ಲಿಯೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಕೋರಿರುತ್ತಾರೆ.

ಡಾ॥ ಹೆಚ್.ಎಸ್. ಸರಳ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೈವಾರ, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿಯೇ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಮತ್ತು ಸದರಿಯವರ ಸೇವೆಯು ತೃಪ್ತಿಕರವಾಗಿಲ್ಲದೇ ಇರುವುದರಿಂದ ಸದರಿಯವರನ್ನು ಕರ್ನಾಟಕ ನಾಗರಿಕ ಸೇವಾ (ಖಾಯಂಪೂರ್ವ ಸೇವಾವಧಿ) ನಿಯಮಗಳು, 1977ರ ನಿಯಮ 6(1)ರನ್ವಯ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 420 ಎಂಎಸ್ಎ 2012, ಬೆಂಗಳೂರು, ದಿನಾಂಕ : 06ನೇ ಸೆಪ್ಟೆಂಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಹೆಚ್.ಎಸ್. ಸರಳ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಕೈವಾರ, ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಕರ್ನಾಟಕ ನಾಗರಿಕ ಸೇವಾ (ಖಾಯಂಪೂರ್ವ ಸೇವಾವಧಿ) ನಿಯಮಗಳು, 1977ರ ನಿಯಮ 6(1)ರನ್ವಯ ಸರ್ಕಾರಿ ಸೇವೆಯಿಂದ ಸರ್ಕಾರವು ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಿಶ್ವನಾಥ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

PR 1077
SC 25

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ : ಮಮಇ 152 ಮಭಾಬ 2013, ಬೆಂಗಳೂರು, ದಿನಾಂಕ : 24ನೇ ಸೆಪ್ಟೆಂಬರ್, 2013.**

ಸಮಗ್ರ ಮಕ್ಕಳ ರಕ್ಷಣಾ ಯೋಜನೆಯ ಮಾರ್ಗಸೂಚಿಗಳನ್ವಯ ಜಿಲ್ಲಾ ಮಕ್ಕಳ ರಕ್ಷಣಾ ಘಟಕವನ್ನು ರಚಿಸಿ ದಿನಾಂಕ: 23–09–2011ರಂದು ಹೊರಡಿಸಲಾದ ಆದೇಶ ಸಂಖ್ಯೆ: ಮಮಇ 79 ಮಭಾಬ 2011ರ ಆದೇಶ ಕ್ರಮ ಸಂಖ್ಯೆ 9ರ ನಂತರ ಈ ಕೆಳಕಂಡ ಅಧಿಕಾರಿಗಳನ್ನು ಸಹ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

1. ಕಾರ್ಮಿಕ ಅಧಿಕಾರಿ, ಕಾರ್ಮಿಕ ಇಲಾಖೆ – ಸದಸ್ಯರು
2. ಸದಸ್ಯ ಕಾರ್ಯದರ್ಶಿ/ಪ್ರತಿನಿಧಿ, ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರ – ಸದಸ್ಯರು
3. ಸದಸ್ಯರು, ಜಿಲ್ಲಾ ಪಂಚಾಯತಿ, (ಜಿಲ್ಲಾ ಪಂಚಾಯಿತಿಯ ಒಬ್ಬ ಮಹಿಳಾ ಸದಸ್ಯರು – ಸದಸ್ಯರು
4. ಸದಸ್ಯರು, ಮಹಾನಗರ ಪಾಲಿಕೆ/ನಗರ ಸಭೆ (ಮಹಾನಗರ ಪಾಲಿಕೆ/ನಗರ ಸಭೆಯ ಒಬ್ಬ ಮಹಿಳಾ ಸದಸ್ಯರು) – ಸದಸ್ಯರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಜರಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ
ನಾಗರಿಕರ ಸಬಲೀಕರಣ ಇಲಾಖೆ

**PR 1079**
**SC 500**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವಾಲಯ

**ವಿಷಯ :** ಪ್ರಸ್ತುತ ಅಸ್ತಿತ್ವದಲ್ಲಿರುವ ಜಿಲ್ಲಾ ಮಟ್ಟದ ಮಕ್ಕಳ ಕಲ್ಯಾಣ ಸಮಿತಿ ಹಾಗೂ ಬಾಲನ್ಯಾಯ ಮಂಡಳಿಗಳ ಕಾಲಾವಧಿಯನ್ನು ವಿಸ್ತರಿಸುವ ಕುರಿತು

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಮಮಇ 255 ಮಭಾಬ 2008, ದಿನಾಂಕ: 06–05–2010
2. ಅಧಿಸೂಚನೆ ಸಂಖ್ಯೆ: ಮಮಇ 206 ಮಭಾಬ 2010, ದಿನಾಂಕ: 13–10–2010
3. ಅಧಿಸೂಚನೆ ಸಂಖ್ಯೆ: ಮಮಇ 206 ಮಭಾಬ 2010, ದಿನಾಂಕ: 14–10–2010
4. ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿ ಇವರ ಪತ್ರ ಸಂಖ್ಯೆ: ಕೆ.ಎಸ್.ಐ.ಸಿ.ಪಿ.ಎಸ್/ CWC/JJB/ಆ.ಪ್ರ. 30/2012–13, ದಿನಾಂಕ: 26–09–2013

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆಯಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ನಿಯಮಗಳು 2007ರ ನಿಯಮ 91ರನ್ವಯ ಬಾಲನ್ಯಾಯ ಮಂಡಳಿ ಮತ್ತು ಮಕ್ಕಳ ಕಲ್ಯಾಣ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡಲು 3 ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಮಾನ್ಯ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಶ್ರೀ ಎಂ.ಪಿ. ಚಿನ್ನಪ್ಪ ಇವರ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006ರ ಸೆಕ್ಷನ್ 4 ಮತ್ತು 29ರಡಿಯಲ್ಲಿ ಕೆಲವು ಷರತ್ತಿನೊಂದಿಗೆ 28 ಜಿಲ್ಲೆಗಳಲ್ಲಿ ಒಟ್ಟು 29 ಮಕ್ಕಳ ಕಲ್ಯಾಣ ಸಮಿತಿಗಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು 3 ವರ್ಷದ ಅವಧಿಗೆ ನಾಮನಿರ್ದೇಶನ ಮಾಡಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006ರ ಸೆಕ್ಷನ್ 4 ಮತ್ತು 29ರಡಿಯಲ್ಲಿ ಕೆಲವು ಷರತ್ತಿನೊಂದಿಗೆ ಯಾದಗಿರಿ ಜಿಲ್ಲೆಯನ್ನು ಹೊರತುಪಡಿಸಿ 28 ಜಿಲ್ಲೆಗಳ ಬಾಲನ್ಯಾಯ ಮಂಡಳಿಗಳ ಅಧ್ಯಕ್ಷರು ಹಾಗೂ ಸಮಾಜ ಕಾರ್ಯಕರ್ತರನ್ನು 3 ವರ್ಷದ ಅವಧಿಗೆ ನಾಮನಿರ್ದೇಶನ ಮಾಡಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಪ್ರಸ್ತುತ ಜಿಲ್ಲಾಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಕ್ಕಳ ಕಲ್ಯಾಣ ಸಮಿತಿ ಮತ್ತು ಬಾಲನ್ಯಾಯ ಮಂಡಳಿಗಳ ಅವಧಿಯು 3 ವರ್ಷಗಳ ಅವಧಿಗೆ ಸೀಮಿತವಾಗಿದ್ದು, ಸದರಿ ಅವಧಿಯು ದಿನಾಂಕ: 12–10–2013 ಮತ್ತು 13–10–2013ಕ್ಕೆ ಕ್ರಮವಾಗಿ ಮುಕ್ತಾಯಗೊಳ್ಳಲಿದೆ. ಈ ಸಮಿತಿ ಮತ್ತು ಮಂಡಳಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಬೇಕಾದ ರಾಜ್ಯಮಟ್ಟದ ಆಯ್ಕೆ ಸಮಿತಿಯ ಕಾಲಾವಧಿಯು ದಿನಾಂಕ: 05–05–2013ಕ್ಕೆ ಮುಕ್ತಾಯಗೊಂಡಿರುವುದರಿಂದ ಸದರಿ ಆಯ್ಕೆ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿ ಈಗಾಗಲೇ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದು, ಈ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. ಈ ಆಯ್ಕೆ ಸಮಿತಿಯನ್ನು ಪುನರ್ ರಚಿಸಿ ಈ ಸಮಿತಿಯು ಮಕ್ಕಳ ಕಲ್ಯಾಣ ಸಮಿತಿ ಮತ್ತು ಬಾಲನ್ಯಾಯ ಮಂಡಳಿಗಳಿಗೆ ಅಧ್ಯಕ್ಷರು ಮತ್ತು ಸದಸ್ಯರನ್ನು ನೇಮಕ ಮಾಡಲು ಕಾಲಾವಕಾಶ ಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ದಿನಾಂಕ: 13–10–2010 ಮತ್ತು 14–10–2010ರಲ್ಲಿ ರಚಿತವಾದ 28 ಜಿಲ್ಲೆಗಳ ಮಕ್ಕಳ ಕಲ್ಯಾಣ ಸಮಿತಿ ಮತ್ತು ಬಾಲನ್ಯಾಯ ಮಂಡಳಿ ಅಧ್ಯಕ್ಷರು ಮತ್ತು ಸದಸ್ಯರ ಅವಧಿಯನ್ನು ವಿಸ್ತರಿಸುವುದು ಅವಶ್ಯಕವಾಗಿರುವುದರಿಂದ ಈ ಅವಧಿಯನ್ನು ಹೊಸದಾಗಿ ಮಕ್ಕಳ ಕಲ್ಯಾಣ ಸಮಿತಿ ಮತ್ತು

ಬಾಲನ್ಯಾಯ ಮಂಡಳಿಗಳನ್ನು ರಚಿಸುವವರೆಗೆ ಅಥವಾ ಮುಂದಿನ ಆದೇಶದವರೆಗೆ ಈ ಎರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಕೋರಿ ಸದಸ್ಯ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಮಮಇ 221 ಮಭಾಬ 2013, ಬೆಂಗಳೂರು, ದಿನಾಂಕ : 09ನೇ ಅಕ್ಟೋಬರ್, 2013.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ 2000, ತಿದ್ದುಪಡಿ 2006ರ ಸೆಕ್ಷನ್ 4 ಮತ್ತು 29ರಡಿಯಲ್ಲಿ ಆದೇಶ ಸಂಖ್ಯೆ: ಮಮಇ 206 ಮಭಾಬ 2010, ದಿನಾಂಕ: 13–10–2010ರಲ್ಲಿ ರಚಿಸಲಾಗಿರುವ ಮಕ್ಕಳ ಕಲ್ಯಾಣ ಸಮಿತಿ ಮತ್ತು ಆದೇಶ ಸಂಖ್ಯೆ: ಮಮಇ 206 ಮಭಾಬ 2010, ದಿನಾಂಕ: 14–10–2010ರಲ್ಲಿ ಬಾಲನ್ಯಾಯ ಮಂಡಳಿಗಳ ಕಾಲಾವಧಿಯು ಮುಕ್ತಾಯವಾಗುತ್ತಿರುವುದರಿಂದ ಸದರಿ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳ ಕಾಲಾವಧಿಯನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳವರೆಗೆ ಅಥವಾ ಮಕ್ಕಳ ಕಲ್ಯಾಣ ಸಮಿತಿ/ಬಾಲನ್ಯಾಯ ಮಂಡಳಿಗಳನ್ನು ಪುನರ್ ರಚಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಜರಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ

PR 1081
SC 300

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಮಮಇ 140 ಮಭಾಬ 2013, ಬೆಂಗಳೂರು, ದಿನಾಂಕ : 07ನೇ ಅಕ್ಟೋಬರ್, 2013.**

ರಾಜ್ಯ ಸರ್ಕಾರದ ಉದ್ಯೋಗಸ್ಥ ಮಹಿಳೆಯರ ವಸತಿ ನಿಲಯ ನಿರ್ಮಾಣ ಯೋಜನೆಯನ್ನು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು ದಿನಾಂಕ: 09–09–2010ರಂದು ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ: ಮಮಇ 67 ಮಭಾಬ 2010ರ ಆದೇಶದ ಅನುಬಂಧದಲ್ಲಿನ ಕಂಡಿಕೆ, **III ಆರ್ಥಿಕ ಸಹಾಯಾನುದಾನ : ಕ್ರಮ ಸಂಖ್ಯೆ 2ರ 4ನೇ ಸಾಲಿನಲ್ಲಿರುವ 10,000 ಚದರ ಅಡಿ ನಿವೇಶನವನ್ನು"** ಎಂಬುದರ ಬದಲಾಗಿ **"4,000 ಚದರ ಅಡಿ ನಿವೇಶನವನ್ನು"** ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಜರಳಿ,**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ
ಸಬಲೀಕರಣ ಇಲಾಖೆ

PR 1080
SC 100

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಸಿ. ಚಿಕ್ಕಯ್ಯ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನಿಯೋಜನೆ ಮೇರೆಗೆ ನಿರ್ದೇಶಕರು, ಕರ್ನಾಟಕ ಚರ್ಮ ತಾಂತ್ರಿಕ ಸಂಸ್ಥೆ, ಬೆಂಗಳೂರು ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ದಾಳಿ ಪ್ರಕರಣದಲ್ಲಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ ಆದೇಶ

**ಓದಲಾಗಿದೆ :** ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಸಂಖ್ಯೆ: ಲೋಕ್/ಐಎನ್ವಿ(ಜಿ)/ಸಿಟಿ/ಕ್ರೈಂ.50/2013, ದಿನಾಂಕ: 10–09–2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರುರವರು ಆರೋಪಿಯಾದ ಶ್ರೀ ಸಿ. ಚಿಕ್ಕಯ್ಯ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನಿಯೋಜನೆ ಮೇರೆಗೆ ನಿರ್ದೇಶಕರು, ಕರ್ನಾಟಕ ಚರ್ಮ ತಾಂತ್ರಿಕ ಸಂಸ್ಥೆ, ಬೆಂಗಳೂರು ಇವರ ವಿರುದ್ಧ ದಾಖಲಾದ ಧಾಳಿ ಪ್ರಕರಣದ ಮೇಲೆ, ಇವರನ್ನು ಅಮಾನತ್ತುಗೊಳಿಸುವಂತೆ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಅಧಿಕಾರಿಯು ಮೂಲ ಆದಾಯಕ್ಕಿಂತ ಹೆಚ್ಚಿನ ಅಕ್ರಮ ಸಂಪತ್ತು ಹೊಂದಿರುತ್ತಾರೆ ಎಂಬ ನಂಬಲರ್ಹವಾದ ಮಾಹಿತಿಯ ಆಧಾರದ ಮೇಲೆ ಇವರ ವಿರುದ್ಧ ಬೆಂಗಳೂರು ನಗರ ಲೋಕಾಯುಕ್ತ ಪೋಲೀಸ್ ಠಾಣಾ ಮೊಕದ್ದಮೆ ಸಂಖ್ಯೆ: 50/2013ರಲ್ಲಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 13(1)(ಇ) ಸಹವಾಚನ 13(2) ಅನ್ವಯ ದಿನಾಂಕ: 29–08–2013ರಂದು ಪ್ರಕರಣ ದಾಖಲಿಸಿಕೊಂಡು ನಂತರ, ನ್ಯಾಯಾಲಯದಿಂದ ಅಗತ್ಯವಾದ ಶೋಧನಾ ವಾರೆಂಟ್‌ಗಳನ್ನು ಪಡೆದುಕೊಂಡು ದಿನಾಂಕ 30–08–2013ರಂದು ಆರೋಪಿತರ ವಾಸದ ಮನೆ, ಕಛೇರಿ ಹಾಗೂ ಬ್ಯಾಂಕ್ ಲಾಕರ್‌ಗಳನ್ನು ಪಂಚರ ಸಮಕ್ಷಮ ಶೋಧನೆ ಮಾಡಿದ್ದು, ಪ್ರಕರಣದ ತನಿಖೆಗೆ ಪೂರಕವಾದ ಚರ ಮತ್ತು ಸ್ಥಿರಾಸ್ತಿಗಳ ಸಂಬಂಧಿತ ದಾಖಲಾತಿಗಳು ದೊರೆತಿದ್ದು, ಅವುಗಳನ್ನು ವಶಪಡಿಸಿಕೊಂಡಿರುವುದಾಗಿ ತಿಳಿಸಿದ್ದಾರೆ.

ಆರೋಪಿತ ಅಧಿಕಾರಿಯ ವಿರುದ್ಧ ದಾಳಿ ಮಾಡಿದ ಸಮಯದಲ್ಲಿ ವಶಪಡಿಸಿಕೊಳ್ಳಲಾದ ಚರ ಮತ್ತು ಸ್ಥಿರಾಸ್ತಿಗಳ, ವಾಹನಗಳ ವಿವರ, ಬ್ಯಾಂಕ್ ಖಾತೆಗಳ ವಿವರ ಮತ್ತು ಸ್ಥಿರ ಠೇವಣಿಗಳ ವಿವರಗಳು, ಆರೋಪಿತರ ಮತ್ತು ಅವರ ಕುಟುಂಬದವರ ಖರ್ಚಿನ ವಿವರಗಳು, ಆರೋಪಿತರ ಕುಟುಂಬದ ಸದಸ್ಯರು ಹೊಂದಿರುವ ಆದಾಯದ ವಿವರ ಇವುಗಳ ಮಾಹಿತಿಯನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರು ನೀಡಿದ್ದು, ಅವುಗಳ ಅಕ್ರಮ ಸಂಪತ್ತು ಗಳಿಕೆಯ ಒಟ್ಟು ಅಂಕಿ ಅಂಶಗಳು/ಮಾಹಿತಿ ಕೆಳಕಂಡಂತೆ ನೀಡಲಾಗಿದೆ.

| | | |
|---|---|---|
| 1. | ಒಟ್ಟು ಆಸ್ತಿಗಳ ಮೊತ್ತ | ರೂ. 1,57,35,426–00 |
| 2. | ಒಟ್ಟು ಖರ್ಚುಗಳ ಮೊತ್ತ | ರೂ. 49,53,750–00 |
| 3. | ಆಸ್ತಿ ಮತ್ತು ಖರ್ಚಿನ ಒಟ್ಟು ಮೊತ್ತ | ರೂ. 2,06,89,176–00 |
| 4. | ಆದಾಯದ ಒಟ್ಟು ಮೊತ್ತ | ರೂ. 1,23,00,000–00 |
| 5. | ಒಟ್ಟು ಆದಾಯಕ್ಕಿಂತ ಹೆಚ್ಚಿನ ಮೊತ್ತ | ರೂ. 83,89,176–00 |
| 6. | ಶೇಕಡವಾರು ಅಕ್ರಮ ಸಂಪತ್ತು | ರೂ. 68.20% |

ಆರೋಪಿತ ಅಧಿಕಾರಿಯು ತಮ್ಮ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಅಧಿಕ ಪ್ರಮಾಣದಲ್ಲಿ ಅಕ್ರಮ ಆಸ್ತಿಗಳನ್ನು ಗಳಿಸಿರುವುದು ಕಂಡು ಬಂದಿದ್ದು, ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 13 (1) (ಇ) ಸಹವಾಚನ 13(2) ಅನ್ವಯ ಅಪರಾಧಿಕ ದುರ್ನಡತೆ ಎಸಗಿರುವುದು ದೃಢಪಟ್ಟಿರುತ್ತದೆ.

ಆರೋಪಿತರು ತಮ್ಮ ಸ್ಥಾನದಲ್ಲಿಯೇ ಮುಂದುವರೆದರೆ, ತಮ್ಮ ಹುದ್ದೆಯ ಪ್ರಭಾವವನ್ನು ಬಳಸಿ ಪ್ರಕರಣದ ಸ್ವತಂತ್ರ ಸುಗಮ ತನಿಖೆಗೆ ಅಡ್ಡಿಪಡಿಸುವ ಮತ್ತು ಸಾಕ್ಷ್ಯಾಧಾರಗಳನ್ನು ತಿರುಚುವ, ನಾಶಪಡಿಸುವ ಸಾಧ್ಯತೆಗಳಿರುವುದರಿಂದ, ಸದರಿಯವರನ್ನು ಅಮಾನತ್ತಿನಲ್ಲಿಟ್ಟು ಹಾಗೂ ಲೀನ್‌ನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರು ತಮ್ಮ ಪ್ರಸ್ತಾವನೆಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 162 ಕೈಸೇವಿ 2013, ಬೆಂಗಳೂರು, ದಿನಾಂಕ : 08ನೇ ಅಕ್ಟೋಬರ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಸಿ. ಚಿಕ್ಕಯ್ಯ, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ನಿಯೋಜನೆ ಮೇರೆಗೆ ನಿರ್ದೇಶಕರು, ಕರ್ನಾಟಕ ಚರ್ಮ ತಾಂತ್ರಿಕ ಸಂಸ್ಥೆ, ಬೆಂಗಳೂರು ಇವರ ಮನೆಯ ಮೇಲೆ ಮಾನ್ಯ ಲೋಕಾಯುಕ್ತರು ಧಾಳಿ ನಡೆಸಿದಾಗ ಇವರ ಮೇಲಿನ ಎಲ್ಲಾ ಬಲ್ಲ ಮೂಲಗಳ ಆದಾಯಕ್ಕಿಂತ ಅಧಿಕ ಪ್ರಮಾಣದಲ್ಲಿ ಅಕ್ರಮ ಆಸ್ತಿ ಗಳಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಸದರಿಯವರು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 13(1) (ಇ) ಸಹವಾಚನ 13 (2) ಅನ್ವಯ ಅಪರಾಧಿಕ ದುರ್ನಡತೆ ಪ್ರದರ್ಶಿಸಿರುವುದು ದೃಢಪಟ್ಟಿರುವುದರಿಂದ ಇವರನ್ನು ಕರ್ನಾಟಕ ಸಿವಿಲ್ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮ 1957ರ ನಿಯಮ 10ರ (ಅಅ) ರನ್ವಯ, ಇವರ ಸೇವೆಯನ್ನು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಿಂದ ಹಿಂಪಡೆದು, ಸದರಿ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿರಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯವರು ನಿಯಮಾವಳಿ ರೀತ್ಯಾ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಹಾಗೂ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸರ್ಕಾರದ ಪೂರ್ವಾನುಮತಿಯಿಲ್ಲದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**PR 1082**
**SC 05**

## ENERGY SECRETARIAT

**Subject :** Constitution of High level Committee for timely and considered resolution of various state level issues in respect of both Central as well as State sector power projects – reg.

**Read :** Secretary, Ministry of Power, GoI, DO letter No. 2/15/2013- PP dated 31-7-2013.

**PREAMBLE :**

Ministry of Power, GoI, in the letter read above has stated that it has been decided to request the State Governments to set up a High Level Committee headed by the Chief Secretary of the State which will provide an institutional mechanism for timely and considered resolution for various State level issues in respect of both Central as well as State sector projects. Such a Committee may have the following composition :

i. Chief Secretary – Chairperson

ii. Principal Secretary/Secretary, Dept. of Energy – Member (Convenor)

iii. Members – Principal Secretary, Secretary, Dept. of Environment and Forests, Dept. of Revenue, Home, PWD, Irrigation, Principal Chief Conservator of Forests and Member Secretary State Pollution Control Board.

Further, the Secretary, Ministry of Power, Govt. of India has stated that the Committee could co-opt/add other members as per requirement and also invite Secretaries/HODs from other Departments as special invitees depending upon the issues involved. Whenever necessary and if so required, a representative of Ministry of Power/CEA, Government of India could be invited to participate.

Hence, the following orders.

**GOVERNMENT ORDER NO. EN 287 CO-ORD 2013, BANGALORE, DATED 16-09-2013**

In the circumstances explained above, Government are pleased to accord approval to form a High Level Committee under the Chairmanship of Chief Secretary to Government with the following officers/officials as members of the Committee to provide an Institutional Mechanism for addressing various State Level issues in respect of both Central as well as State Sector Power Projects.

| Sl. No. | Members of the Committee | |
|---|---|---|
| 1 | Chief Secretary to Government | Chairperson |
| 2 | Additional Chief Secretary/Principal Secretary to Government, Home Department. | Member |
| 3 | Additional Chief Secretary/Principal Secretary to Government, Finance Department. | Member |
| 4 | Principal Secretary to Government, Revenue Department. | Member |
| 5 | Principal Secretary to Government, Public Works Department. | Member |
| 6 | Principal Secretary to Government, Environment, Forest & Ecology Department. | Member |
| 7 | Principal Secretary to Government, Water Resources Department. | Member |
| 8 | Principal Secretary to Government, Infrastructure Development Department. | Member |
| 9 | Principal Secretary to Government, Urban Development. | Member |
| 10 | Principal Chief Conservator of Forest. | Member |
| 11 | Member Secretary, State Pollution Control Board. | Member |
| 12 | Managing Director, Karnataka Power Corporation Limited. | Member |
| 13 | Managing Director, Karnataka Power Transmission Corporation Limited. | Member |
| 14 | Managing Director, Bangalore Electricity Supply Company. | Member |
| 15 | Managing Director, Hubli Electricity Supply Company. | Member |
| 16 | Chairman, Confederation of Indian Industry (CII). | Special Invitee |
| 17 | Chairman, Federation of Karnataka Chambers of Commerce and Industry (FKCCI). | Special Invitee |
| 18 | Additional Chief Secretary/Principal Secretary to Government, Energy Department. | Member/Convenor |

The committee could co-opt/add other members as per requirement and also invite Secretaries/HOD's from other Departments as Special Invitees depending upon the issues involved. Whenever necessary and if so required a representative of Ministry of Power/CEA Government of India may be invited.

By Order and in the name of the Governor of Karnataka,
**A.A. CHAPPARBAND,**
Under Secretary to Government,
Energy Department.

**PR. 1117**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59.